# ಅಜ್ಜನೊಂದಿಗೆ ಕಳೆದ ದಿನಗಳು





# ಅಜ್ಜನೊಂದಿಗೆ ಕಳೆದ ದಿನಗಳು


ಮೂಲಕಥೆ ಮತ್ತು ಚಿತ್ರಗಳು; ಶಂಕರ್

ಕನ್ನಡ ಅನುವಾದ; ಶಾ. ಬಾಲೂ ರಾವ್






ಚಿಲ್ರನ್ಸ್ ಬುಕ್ ಟ್ರಸ್ಟ್, ಹೊಸ ದೆಹಲಿ

## ಪರಿವಿಡಿ



## ಅಜ್ಜನ ಮನೆಯಲ್ಲಿ

ನನ್ನನ್ನು ಎಲ್ಲರೂ 'ರಾಜ' ಎಂದು ಕರೆಯುತ್ತಿದ್ದರು. 'ರಾಜ' ನನ್ನ ನಿಜವಾದ ಹೆಸರಲ್ಲ. ಆದರೂ ಹಾಗೆ ಕರೆಸಿಕೊಳ್ಳಲು ನನಗೆ ತುಂಬ ಆಸೆ. ನಾನು ಅಜ್ಜ ಅಜ್ಜಿಯರ ಜೊತೆ ವಾಸಿಸುತ್ತಿದ್ದೆ. ಅವರ ಪೋಷಣೆಯಲ್ಲಿಯೇ ನಾನು ಬೆಳೆಯುತ್ತಿದ್ದುದು. ನಾನಿನ್ನೂ ಮಗುವಾಗಿರುವಾಗಲೇ ಅಮ್ಮ ತೀರಿಕೊಂಡಳು. ಅಪ್ಪ ನನ್ನನ್ನು ಅಜ್ಜ ಅಜ್ಜಿಯರ ಬಳಿ ಬಿಟ್ಟುಹೋದರು. ನನ್ನನ್ನು ಬೆಳೆಸಿ ಮುಂದಕ್ಕೆ ತಂದವರು ಅವರೇ.

ನಾವು ಒಂದು ದೊಡ್ಡ ಮನೆಯಲ್ಲಿ ವಾಸಮಾಡುತ್ತಿದ್ದೆವು. ಆದರೆ ನಮ್ಮ ಸಂಸಾರ ಮಾತ್ರ ಚಿಕ್ಕದು. ಅಜ್ಜ, ಅಜ್ಜಿ, ಚಿಕ್ಕಪ್ಪ ಮತ್ತು ನಾನು – ಮನೆಯಲ್ಲಿ ನಾವಿಷ್ಟೇ ಜನ. ನಮಗೆ ತುಂಬ ಮಂದಿ ನೆಂಟರಿದ್ದರು. ಆದರೆ ಅವರೆಲ್ಲರೂ ತಮ್ಮತಮ್ಮ ಮನೆಗಳಲ್ಲಿ ಇರುತ್ತಿದ್ದರು.

ಅಜ್ಜ ಎತ್ತರವಾದ ಬಲಿಷ್ಠ ವ್ಯಕ್ತಿ. ಅವರು ಮಾತಾಡುತ್ತಿದ್ದುದು ಯಾವಾಗಲೂ ದೊಡ್ಡ ಧ್ವನಿಯಲ್ಲಿಯೇ. ಅವರಿಗೆ ಹಳ್ಳಿಯಲ್ಲಿ ಪ್ರತಿಯೊಬ್ಬರ ಪರಿಚಯವೂ ಇತ್ತು. ಜನ ಅವರನ್ನು ತುಂಬ ಗೌರವದಿಂದ ಕಾಣುತ್ತಿದ್ದರು. ಸಲಹೆ, ಸಹಾಯ ಕೋರಿ ಅವರ ಬಳಿಗೆ ಬರುತ್ತಿದ್ದರು.

ಅಜ್ಜಿಯದು ಮಮತೆ ತುಂಬಿದ ಮೃದು ಸ್ವಭಾವ. ಅವಳು ನನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು. 'ಹಾಲು ಕುಡಿ', 'ಊಟ ಮಾಡು', 'ಮಡಿ ಉಟ್ಟುಕೊ', 'ಮಲಗಿಕೊ' ಎಂದು ಒಂದಲ್ಲ ಒಂದು ಹೇಳುತ್ತ ನೆರಳಿನಂತೆ ನನ್ನನ್ನು ಹಿಂಬಾಲಿಸುತ್ತಿದ್ದಳು. ಅದು ನನಗೆ ಇಷ್ಟವಾಗುತ್ತಿರಲಿಲ್ಲ. ಆದರೂ ಅಜ್ಜಿಯೆಂದರೆ ನನಗೆ ತುಂಬಾ ಅಕ್ಕರೆ.



ಚಿಕ್ಕಪ್ಪ ಬಹಳ ಬುದ್ಧಿವಂತ. ಹೊಲ ತೋಟ ನೋಡಿಕೊಳ್ಳುವುದರಲ್ಲಿ ಅಜ್ಜನಿಗೆ ಸಹಾಯ ಮಾಡುತ್ತಿದ್ದ. ಜನರಿಗೆ ಅವನು ಬೇಕಾದವನಾಗಿದ್ದ. ನನಗೂ ಅವನನ್ನು ಕಂಡರೆ ತುಂಬಾ ಪ್ರೀತಿ. ನಾನು ತೊಂದರೆಗೆ ಸಿಕ್ಕಿದಾಗಲೆಲ್ಲಾ ಅವನು ಸಹಾಯಕ್ಕೆ ಬರುತ್ತಿದ್ದ.

ಮನೆಯಲ್ಲಿ ಆಡಲು ನನಗೆ ಯಾರೂ ಸ್ನೇಹಿತರಿರಲಿಲ್ಲ. ಹುಡುಗರ ಸಂಗಡ ಆಟವಾಡಲು ನಾನು ಹೊರಗೆ ಹೋಗುವುದು ಅಜ್ಜನಿಗೆ ಇಷ್ಟವಿರಲಿಲ್ಲ. ಹಾಗೆ ಹೋದರೆ ನಾನು ಕೆಟ್ಟ ದಾರಿ ಹಿಡಿಯುವೆನೆಂದು ಅಜ್ಜನ ನಂಬಿಕೆ. ನಮ್ಮ ಮನೆಗೇ ಬಂದು ಆಡಲು ಹುಡುಗರು ಇಷ್ಟಪಡುತ್ತಿರಲಿಲ್ಲ. ಅಜ್ಜನನ್ನು ಕಂಡರೆ ಅವರಿಗೆ ಭಯ.

ಆದರೂ ಅಜ್ಜನ ಜೊತೆ ಜೀವನ ಬೇಸರವಾಗುತ್ತಿರಲಿಲ್ಲ. ಮನೆ, ಮನೆಯ ಸುತ್ತಲೂ ಇದ್ದ ವಿಶಾಲವಾದ ತೋಟ ನನಗೆ ಮೆಚ್ಚಿಗೆಯಾಗಿತ್ತು. ತೋಟದಲ್ಲಿ ತೆಂಗು, ಮಾವು ಹಾಗೂ ಇತರ ಅನೇಕ ಬಗೆಯ ಮರಗಳಿದ್ದವು. ಹಕ್ಕಿ, ಬಣ್ಣದ ಚಿಟ್ಟೆ, ಜೇನು

ಹುಳಗಳು ಇರುತ್ತಿದ್ದವು. ಮೀನಿನಿಂದ ತುಂಬಿದ ಹಲವಾರು ಕೊಳಗಳಿದ್ದವು. ಮೀನು ತಿನ್ನಲೆಂದು ಕೊಕ್ಕರೆ, ಮಿಂಚುಳ್ಳಿ ಮುಂತಾದ ನೀರಹಕ್ಕಿಗಳು ಕೊಳಕ್ಕೆ ಬರುತ್ತಿದ್ದವು.

ತೋಟದ ಒಂದು ಮೂಲೆಯಲ್ಲಿ ಗಿಡಬಳ್ಳಿ ಕುರುಚಲುಗಳು ಹುಚ್ಚಾಬಟ್ಟೆ ಬೆಳೆದು ಒಂದು ತೋಪಾಗಿತ್ತು. ಆ ತೋಪಿನಲ್ಲಿ ನರಿ, ಮುಂಗುಸಿ, ಕಾಡುಬೆಕ್ಕು, ಗೂಬೆ ಮುಂತಾದವು ವಾಸ ಮಾಡಿಕೊಂಡಿದ್ದವು.

ನಮ್ಮಲ್ಲಿ ಹಸು ಎತ್ತು ಹೋರಿಗಳಿಗೇನೂ ಕಡಿಮೆಯಿರಲಿಲ್ಲ. ಪುಟ್ಟಪುಟ್ಟ ಕರುಗಳು ತೋಟದಲ್ಲೆಲ್ಲಾ ಕುಣಿಯುತ್ತ ಓಡಾಡುತ್ತಿದ್ದವು. ಕರುಗಳ ಜೊತೆ ಆಡುವುದೆಂದರೆ, ಹಕ್ಕಿಗಳನ್ನು ನೋಡುವುದೆಂದರೆ ನನಗೆ ತುಂಬಾ ಇಷ್ಟ. ನರಿಗಳು ತೋಪಿನಿಂದ ಹೊರಬರುವುದನ್ನು ನೋಡಲು ಕಾಯುತ್ತ ಕುಳಿತಿರುತ್ತಿದ್ದೆ. ಮುಂಗುಸಿಗಳ ಬೆನ್ನಟ್ಟಿ ಹೋಗುತ್ತಿದ್ದೆ. ಚಿಟ್ಟೆಗಳನ್ನೂ ಹುಳಹುಪ್ಪಟೆಗಳನ್ನೂ ಹಿಡಿಯುತ್ತಿದ್ದೆ.





## ಹಾವು ಕಚ್ಚಿತು

ಒಂದು ದಿನ ಮನೆಯ ಅಂಗಳದಲ್ಲಿ ಒಂದು ಹಾವಿನ ಮರಿ ಕಣ್ಣಿಗೆ ಬಿತ್ತು. ಅದು ನಿಧಾನವಾಗಿ ಹರಿದು ಹೋಗುತ್ತಿತ್ತು. ನನ್ನನ್ನು ಕಂಡೊಡನೆಯೇ ಬೇಗ ಬೇಗ ಹರಿದು ಹೋಗಿ ಒಂದು ತೆಂಗಿನ ಖಾಲಿ ಬುರುಡೆಯೊಳಗೆ ಅವಿತುಕೊಂಡಿತು. ನಾನು ಮೆಲ್ಲನೆ ತೆಂಗಿನ ಬುರುಡೆಯ ಹತ್ತಿರ ಹೋಗಿ, ಅದರ ಬಾಯನ್ನು ಒಂದು ಕಲ್ಲಿನಿಂದ ಮುಚ್ಚಿಬಿಟ್ಟೆ. ಆ ಮೇಲೆ ಆ ಬುರುಡೆಯನ್ನೆತ್ತಿಕೊಂಡು ಅಜ್ಜಿಯ ಬಳಿ ಓಡಿದೆ.

"ಅಜ್ಜಿ, ಅಜ್ಜಿ, ನೋಡು ಬಾ ಇಲ್ಲಿ. ನಾನೊಂದು ಹಾವು ಹಿಡಿದಿದ್ದೇನೆ"– ಎಂದು ಕೂಗಿ ಹೇಳಿದೆ.

"ಹಾವೆ?"— ಅಜ್ಜಿ ಗಾಬರಿಯಿಂದ ಕೇಳಿದಳು. ಅವಳಿಗೆ ದಿಗಿಲಾಯಿತು. ಕೂಗಿಕೊಂಡಳು. ಅಜ್ಜ ಓಡಿ ಬಂದರು. ತೆಂಗಿನ ಬುರುಡೆಯಲ್ಲಿ ಹಾವು ಹಿಡಿದಿದ್ದೇನೆಂದು ಕೇಳಿದ ಕೂಡಲೇ ಅದನ್ನು ಕಿತ್ತುಕೊಂಡು ದೂರ ಎಸೆದರು. ಹಾವು ಹೊರ ಹರಿದು ಒಂದು

ಪೊದೆಯ ಹಿಂದೆ ಕಣ್ಮರೆಯಾಯಿತು. ಹಾವು ಅಪಾಯಕಾರಿ, ಆದ್ದರಿಂದ ಮುಂದೆ ಎಂದೆಂದಿಗೂ ಅದರ ಹತ್ತಿರ ಸುಳಿಯಕೂಡದು ಎಂದು ಅಜ್ಜ ಎಚ್ಚರಿಕೆ ಕೊಟ್ಟರು.

ಇದು ನಡೆದ ಸಂಜೆಯೇ ಒಂದು ಜೇನು ಹುಳವನ್ನು ಹಿಡಿಯಹೋದೆ. ಅದು ನನ್ನ ಕೈಬೆರಳನ್ನು ಕಚ್ಚಿತು. ಚುರುಚುರನೆ ಉರಿಯಹತ್ತಿತು. ಅಜ್ಜಿಯ ಬಳಿ ಓಡಿ, ನನ್ನ ಕೈ ಕಚ್ಚಿಬಿಟ್ಟದೆ, ನೋವು ನಿಲ್ಲಿಸಲು ಏನಾದರೂ ಮಾಡು ಅಂದೆ. ಹಾವೇ ಕಚ್ಚಿದೆ ಅಂದು ಕೊಂಡಳು ಅಜ್ಜಿ. "ಬೇಗ ಬಂದು ನೋಡಿ" ಎಂದು ಅಜ್ಜನನ್ನು ಕೂಗಿದಳು.

ಅಜ್ಜ ತಕ್ಷಣ ಓಡಿಬಂದರು. ಬೆರಳನ್ನು ನೋಡಿದರು. ಅಲ್ಲೊಂದು ನೀಲಿಯ ಕರೆಯಿತ್ತು. ಒಂದು ಮಾತೂ ಆಡದೆ ನನ್ನನ್ನೆತ್ತಿ ಕೊಂಡು ಓಡುತ್ತ ಹೊರಟರು. ತೋಟದ ನಡುವೆ ಹಾಗೂ ಬತ್ತದ ಗದ್ದೆಗಳನ್ನು ದಾಟುತ್ತ ಓಡಿದರು. ನಮ್ಮ ಮನೆಯಿಂದ ಸಾಕಷ್ಟು ದೂರದಲ್ಲಿದ್ದ ಒಂದು ಸಣ್ಣ ಮನೆ ತಲಪುವ ವರೆಗೂ ಒಂದೇ ಉಸಿರಿಗೆ ಓಡಿಯೇ ಓಡಿದರು. ಆ ಮನೆಯ ಮುಂದೆ ನಿಂತು, ಅದರಲ್ಲಿ ವಾಸವಾಗಿದ್ದಾತನನ್ನು ಕೂಗಿ ಕರೆದರು.

ನರೆಗೂದಲಿನ ಒಬ್ಬ ಮುದುಕರು ಆ ಮನೆಯಿಂದ ಹೊರ ಬಂದರು. ಅವರಿಗೆ ಹಾವಿನ ಕಡಿತಕ್ಕೆ ಮದ್ದು ಮಾಡುವುದು





ಗೊತ್ತಿತ್ತು. ನನ್ನನ್ನು ಗುಣಪಡಿಸುವಂತೆ ಅಜ್ಜ ಅವರನ್ನು ಕೇಳಿಕೊಂಡರು. ಮುದುಕರು ನನ್ನನ್ನು ಒಳಗೆ ಕರೆದುಕೊಂಡು ಹೋಗಿ, ಕೈಬೆರಳನ್ನು ಪರೀಕ್ಷಿಸಿ ನೋಡಿ, ಅಲುಗಾಡದೆ ಕುಳಿತುಕೊಳ್ಳುವಂತೆ ಹೇಳಿದರು. ನಾನು ಅಜ್ಜನ ತೊಡೆ ಹತ್ತಿ ಕುಳಿತೆ. ಮುದುಕರು ಒಂದು ಹಿತ್ತಾಳೆಯ ತಂಬಿಗೆಯಲ್ಲಿ ನೀರು ತುಂಬಿ ತಂದು, ನಮ್ಮ ಮುಂದೆ ಕುಳಿತು, ಮಂತ್ರ ಮಟಗುಟ್ಟತೊಡಗಿದರು.

ಕಚ್ಚಿದ್ದದ್ದು ಹಾವಲ್ಲ, ಜೇನು ಎಂದು ಅವರಿಗೆ ಹೇಳೋಣ ಅನ್ನಿಸಿತು. ಆದರೆ ಅಜ್ಜ ಮಾತನಾಡಲು ಅವಕಾಶವಿಲ್ಲದಂತೆ ನನ್ನನ್ನು ಭದ್ರವಾಗಿ ಹಿಡಿದು ಕೂರಿಸಿದ್ದಾರೆ. ಆ ಹೊತ್ತಿಗೆ ಅಜ್ಜಿಯೂ ಅಲ್ಲಿಗೆ ಬಂದಳು. ಅವಳೊಂದಿಗೆ ಇನ್ನೂ ಹಲವರಿದ್ದರು. ಅವರೆಲ್ಲರ ಮುಖದಲ್ಲಿಯೂ ವ್ಯಥೆ ತುಂಬಿತ್ತು. ಎಲ್ಲರೂ ಮೌನವಾಗಿ ನನ್ನನ್ನೇ ನೋಡುತ್ತಾ, ನಿಂತಿದ್ದರು. ಅಷ್ಟು ಹೊತ್ತಿಗೆ ಬೆರಳಿನ ನೋವು ಇಳಿದಿತ್ತು. ಆದರೇನು; 'ಹಾವಿನ ಕಡಿತ'ದಿಂದ ಗುಣಹೊಂದಲು ನಾನು ಅಲ್ಲೇ ಕುಳಿತಿರಬೇಕಾಗಿತ್ತು!

ಕೆಲವು ನಿಮಿಷಗಳ ಮೇಲೆ ಮುದುಕರು ಎದ್ದರು. ಬೆರಳನ್ನು ತೊಳೆದು ಕುಡಿಯಲು ಸ್ವಲ್ಪ ನೀರು ಕೊಟ್ಟರು. ಇನ್ನೂ ಕೊಂಚ ಹೊತ್ತು ಮಾತಾಡದೆ ಇರಬೇಕೆಂದರು. ಆ ಮೇಲೆ ಅಜ್ಜನ ಕಡೆ ತಿರುಗಿ, "ದೇವರು ದೊಡ್ಡವನು! ಹೊತ್ತಿಗೆ ಸರಿಯಾಗಿ ಕರೆದುಕೊಂಡು ಬಂದಿರಿ. ಇನ್ನೇನೂ ಅಪಾಯದ ಭಯವಿಲ್ಲ. ನಿಜವಾಗಿಯೂ ಇವನನ್ನು ಕಚ್ಚಿದ್ದದ್ದು ಒಂದು ವಿಷಸರ್ಪ, ನೋಡಿ" ಅಂದರು.

ಅಜ್ಜ, ಅಜ್ಜಿ ಹಾಗೂ ಇತರರೆಲ್ಲರೂ ಮುದುಕರನ್ನು ಅವರು ಮಾಡಿದ ಮಂತ್ರಚಿಕಿತ್ಸೆಗೆ ವಂದಿಸಿದರು. ಮನೆಗೆ ಬಂದ ಮೇಲೆ ಅಜ್ಜ ಆವರಿಗೆ ಕಾಣಿಕೆ ಕಳಿಸಿಕೊಟ್ಟರು.



## ಮಳೆ ಬರಿಸಿದೆ

ಅದೊಂದು ಸಂಜೆ ಭಾರೀ ಮಳೆ ಬಂದು ನಿಂತಿತ್ತು. ಅಜ್ಜ ಶ್ರೀಗಂಧದ ಮರದ ಬುಡದಲ್ಲಿ ಜಾಜಿಯ ಪೊದೆಯಲ್ಲಿ ಹೂ ಕೀಳುತ್ತಿದ್ದರು. ಮರದ ಎಲೆಗಳ ತುಂಬ ಮಳೆಯ ಹನಿ ಕೂತಿತ್ತು. ಮರ ಅಲ್ಲಾಡಿಸಿ ಮಳೆ ಬರಿಸುವುದು ಹೇಗೆಂದು ನನಗೆ ಗೊತ್ತಿತ್ತು. ಹಾಗೆ ಮಾಡಿದ್ದಾದರೆ ಅಜ್ಜನೂ ನಾನೂ ಚೆನ್ನಾಗಿ ನೆನೆಯುತ್ತಿದ್ದೆವು. ಮಳೆಯಲ್ಲಿ ತೊಯ್ಯುವುದೆಂದರೆ ನನಗೇನೋ ಇಷ್ಟವೇ. ಅಜ್ಜನಿಗೆ ಅದು ಇಷ್ಟವಾಗದೆ ಇರಬಹುದು. ಆದರೂ ಅದರಿಂದ ಎಷ್ಟೊಂದು ತಮಾಷೆ!

ಮೆಲ್ಲನೆ ಶ್ರೀಗಂಧದ ಮರದ ಬಳಿ ಹೋಗಿ, ನನ್ನ ಬಲವನ್ನೆಲ್ಲಾ ಬಿಟ್ಟು ಅದನ್ನು ಅಲ್ಲಾಡಿಸಿದೆ. ಜೋರಾಗಿ ಮಳೆ ಸುರಿಯಿತು. ಅಜ್ಜ ನಾನು ಇಬ್ಬರೂ ನೆನೆದು ಒದ್ದೆಮುದ್ದೆಯಾದೆವು. ಅದು ನನಗೆ ಇಷ್ಟವಾಯಿತು. ಆದರೆ ಅಜ್ಜನಿಗಲ್ಲ. ಅವರು ಕೋಪದಿಂದ ನನ್ನ ಕಡೆ ದುರುಗುಟ್ಟಿ ನೋಡಿದರು. ನನ್ನನ್ನು ಹಿಡಿದು ಹೊಡೆಯುವರೆಂದು ಖಂಡಿತವಾಯಿತು. ನಾನು ಕಾಲಿಗೆ ಬುದ್ಧಿ ಹೇಳಿದೆ. ಅವರು ಅಟ್ಟಿಸಿಕೊಂಡು ಬಂದರು. ನಾನು ಇದ್ದಿದ್ದೂ ಜೋರಾಗಿ ಓಡಿದೆ. ಅವರು ನನಗಿಂತಲೂ ವೇಗವಾಗಿ ಓಡಿದರು. ನಾನು ಇನ್ನೇನು ಅವರ ಕೈಗೆ ಸಿಕ್ಕಿಬೀಳಬೇಕು, ಅಷ್ಟರಲ್ಲಿ ಅವರು ಎಡವಿಬಿದ್ದರು. ನಾನು ಬತ್ತದ ಗದ್ದೆಗೆ ಓಡಿ ಹೋಗಿ ಅವಿತುಕೊಂಡು ಕುಳಿತೆ. "ಮನೆಗೆ ಬಾ, ಬುದ್ಧಿ ಕಲಿಸುತ್ತೇನೆ" ಎಂದು ಅಜ್ಜ ಕೂಗಾಡುತ್ತಿದ್ದುದು ಕೇಳಿಸಿತು.

ಅಜ್ಜ ಹೊಡೆಯುವರೆಂಬ ಹೆದರಿಕೆಯಿಂದ ನನಗೆ ಮನೆಗೆ ಹೋಗುವ ಮನಸ್ಸಾಗಲಿಲ್ಲ. ಗದ್ದೆಯಲ್ಲೇ ಇದ್ದುಬಿಟ್ಟೆ. ಕತ್ತಲಾಗುತ್ತ ಬಂದಿತ್ತು. ಕತ್ತಲಲ್ಲಿ ಒಬ್ಬನೇ ಗದ್ದೆಯಲ್ಲಿರುವುದಕ್ಕೂ ಭಯ. ನಾನು ಕೇಳಿದ ಭೂತ ಪ್ರೇತಗಳ ಕತೆಗಳೆಲ್ಲವೂ ನೆನಪಿಗೆ ಬಂದವು. ಎದ್ದು, ಒಮ್ಮೆ ಸುತ್ತಲೂ ನೋಡಿ, ಮನೆಯ ಕಡೆ ಓಡಿದೆ.



ಅಜ್ಜನಿಗೆ ಮುಖ ತೋರಿಸಲು ನನಗಿನ್ನೂ ಭಯವೇ. ಆದ್ದರಿಂದ ಮನೆಯೊಳಕ್ಕೆ ಹೋಗದೆ, ದನದ ಕೊಟ್ಟಿಗೆಗೆ ನುಗ್ಗಿ, ಅಟ್ಟ ಹತ್ತಿ ಕುಳಿತುಕೊಂಡೆ. ಅಜ್ಜ ಮನೆಯ ಜಗಲಿಯ ಮೇಲೆ ಕುಳಿತು ದೇವರ ಪ್ರಾರ್ಥನೆ ಮಾಡುತ್ತಿದ್ದುದು ಅಲ್ಲಿಂದ ಕಾಣಿಸುತ್ತಿತ್ತು.

ಅಜ್ಜಿ ನನಗಾಗಿ ಕಾಯುತ್ತಿದ್ದಳು. ನಾನಿನ್ನೂ ಮನೆಗೆ ಬಾರದೆ ಇದ್ದದ್ದನ್ನು ನೋಡಿ ಮನೆಯಲ್ಲೆಲ್ಲಾ ಹುಡುಕ ತೊಡಗಿದಳು. ಆ ಮೇಲೆ ಹೊರಬಂದು ತೋಟದಲ್ಲಿ ಎಲ್ಲಾದರೂ ಇರಬಹುದೆಂದು ಜೋರಾಗಿ ಕೂಗಿ ಕರೆದಳು. ನಾನು ಉತ್ತರ ಕೊಡಲಿಲ್ಲ. ಅಜ್ಜನಲ್ಲಿಗೆ ಹೋಗಿ ನಾನೆಲ್ಲಿ ಎಂದು ಕೇಳಿದಳು. "ಮನೆಯೊಳಗೇ ನೋಡು. ಎಲ್ಲೋ ಅಡಗಿಕೊಂಡಿದ್ದಾನೆ" ಎಂದರು ಅವರು.

"ಮನೆಯಲ್ಲೆಲ್ಲೂ ಇಲ್ಲ. ಎಲ್ಲಾ ಕಡೆಯೂ ಹುಡುಕಿದೆ"— ಅಜ್ಜಿ ಹೇಳಿದಳು.

ಅಜ್ಜ ಎದ್ದು ಬಂದರು. "ಬಾರೋ ರಾಜ, ಬಾ. ನಿನ್ನ ಹೊಡೆಯೋಲ್ಲ ಬಾರೋ" ಎಂದು ಕೂಗು ಹಾಕಿದರು.

ಅವರು ಹೊಡೆಯದೇ ಬಿಡುವುದಿಲ್ಲವೆಂದು ಹೆದರಿ ನಾನು ಉತ್ತರ ಕೊಡಲಿಲ್ಲ.

ಅಜ್ಜಿಗೆ ಸಿಟ್ಟು ಬಂದಿತ್ತು. "ಅವನೆಲ್ಲಿ ಬರ್‍ತಾನೆ? ನೀವೇ ಅವನನ್ನು ಬೈದು ಅಟ್ಟುಬಿಟ್ಟಿರಿ. ಮನೆಗೆ ಬಂದರೆ ಹೊಡೆಯುತ್ತೇನೆ ಅಂತ ನೀವು ಹೇಳಿದ್ದು ನನಗೆ ಕೇಳಿಸಲಿಲ್ಲ ಅಂದುಕೊಂಡಿರಾ? ಪಾಪ! ಮಗು ನಿಮಗೆ ಹೆದರಿಕೊಂಡು ಓಡಿ ಹೋಗಿದೆ" ಅಂದಳು.

ಅಜ್ಜ ಆಳುಗಳನ್ನು ಕರೆದು, ಹೋಗಿ ನನ್ನನ್ನು ಹುಡುಕಿಕೊಂಡು ಬರುವಂತೆ ಹೇಳಿದರು. ಆಳುಗಳು ಹೋಗಿ, ಕೊಂಚ ಹೊತ್ತಿನ ಮೇಲೆ ನಾನೆಲ್ಲೂ ಸಿಗಲಿಲ್ಲವೆಂದು ಬಂದು ಹೇಳಿದರು. ಅಜ್ಜಿ ಅಳತೊಡಗಿದಳು. ಅಜ್ಜ ಅಂಗಳದಲ್ಲಿ ಆ ಕಡೆಯಿಂದ ಈ ಕಡೆಗೆ ಶತಪಥ ಹಾಕಲು ಆರಂಭಿಸಿದರು.

ನಾನು ಕಣ್ಮರೆಯಾಗಿರುವ ಸುದ್ದಿ ಹರಡಿತು. ಮೊದಲು ನೆರೆಹೊರೆಯವರು ಬಂದರು. ಅವರ ಹಿಂದೆ ನೆಂಟರಿಷ್ಟರೂ ಸುದ್ದಿ ತಿಳಿದ ಇತರರೂ ಬಂದರು. ಅವರಲ್ಲಿ ಅನೇಕರು ಅಜ್ಜಿಗೆ ಸಮಾಧಾನ ಮಾಡಲು ಬಂದಿದ್ದರು.

ಇದು ಅಜ್ಜನಿಗೆ ಸರಿಬೀಳಲಿಲ್ಲ. "ಹುಡುಗನಿಗೆ ಏನೂ ಆಗಿಲ್ಲ. ಎಲ್ಲೋ ಅವಿತುಕೊಂಡಿದ್ದಾನೆ. ಇಲ್ಲಿ ಕಾಲ ಕಳೆಯುವ ಬದಲು ನಿಮ್ಮಲ್ಲಿ ಕೆಲವರು ಹೋಗಿ ಅವನನ್ನು ಹುಡುಕಬಾರದೆ" ಎಂದು ಆರ್ಭಟಿಸಿದರು.

ಬಂದಿದ್ದವರಲ್ಲಿ ಕೆಲವರು ನನ್ನನ್ನು ಹುಡುಕಿಕೊಂಡು ಬರಲು ಹೋದರು. ಇನ್ನೂ ಹೆಚ್ಚು ಹೆಚ್ಚು ಜನರು ಬರತೊಡಗಿದರು. ಸ್ವಲ್ಪ ಹೊತ್ತಿನಲ್ಲಿ ಅಲ್ಲೊಂದು ಗುಂಪೇ ಸೇರಿಬಿಟ್ಟಿತ್ತು. ಅಷ್ಟು ಹೊತ್ತಿಗೆ ಅಜ್ಜಿಗೆ ನನ್ನನ್ನು ಮತ್ತೆ ಕಾಣುತ್ತೇನೆಂಬ ಭರವಸೆ ಉಳಿದಿರಲಿಲ್ಲ. ಅಲ್ಲಿ ಬಂದಿದ್ದವರಿಗೆ ನಾನೆಷ್ಟು ಒಳ್ಳೆಯ ಹುಡುಗ ಎಂದು ವರ್ಣಿಸಿ ಹೇಳಲು ಸುರು ಮಾಡಿದಳು.

ಹುಡುಕಲು ಹೋಗಿದ್ದ ಪಡೆಗಳೆಲ್ಲವೂ ನನ್ನನ್ನು ಕಾಣದೆ ಹಿಂದಿರುಗಿದವು. ಅಜ್ಜಿ ಗಟ್ಟಿಯಾಗಿ ಅಳತೊಡಗಿದಳು. ಗುಂಪಿನಲ್ಲಿದ್ದ

ಹೆಂಗಸರೂ ಅತ್ತರು. ಮನೆಯಾಳುಗಳೂ ಆ ಗೋಳಿನಲ್ಲಿ ದನಿಗೂಡಿಸಿದರು. ಅವರೆಲ್ಲರೂ ನಾನು ಸತ್ತೇ ಹೋದೆನೇನೋ ಎಂಬಂತೆ ಆಡುತ್ತಿದ್ದರು.

ಅಜ್ಜಿಯ ಅವಸ್ಥೆಯನ್ನು ಕಂಡು ನನಗೆ ದುಃಖವಾಯಿತು. ಅಟ್ಟದಿಂದ ಇಳಿದು ಬರಲೇ ಅನ್ನಿಸಿತು.

ಅಜ್ಜನದು ಗಟ್ಟಿ ಮನಸ್ಸು. ಆದರೂ ಅವರಿಗೂ ದುಃಖವಾಗಿತ್ತೆಂದು ಬಲ್ಲೆ. ಏನೇ ಆಗಲಿ ಅವರು ಮಾತ್ರ ಆಸೆ ಬಿಟ್ಟಿರಲಿಲ್ಲ. ಎದ್ದು ನಮ್ಮ ಮನೆದೇವರ ಗುಡಿಯಿದ್ದ ಕಡೆ ಮುಖಮಾಡಿ ನಿಂತು ಪ್ರಾರ್ಥಿಸಿದರು.



"ಕಾಪಾಡಪ್ಪ ದೇವರೇ. ನನ್ನ ಮಗುವನ್ನು ನನಗೆ ಹಿಂದಿರುಗಿ ಕೊಡು. ನಾನಿನ್ನು ಕಾಯಲಾರೆ"– ಹೀಗೆಂದು ಮೌನವಾಗಿ ನಿಂತು ಧ್ಯಾನ ಮಾಡಿದರು.

ಆ ಸಮಯಕ್ಕೆ ಸರಿಯಾಗಿ ಚಿಕ್ಕಪ್ಪ ಬಂದ. ಮನೆಯಲ್ಲಿ ನಡೆದದ್ದನ್ನೆಲ್ಲಾ ಕೇಳಿ ತಿಳಿದುಕೊಂಡ. ಸುತ್ತಲೂ ನೋಡಿ ನಾನು ಎಲ್ಲಿದ್ದೇನೆಂದು ಊಹಿಸಿಕೊಂಡ. ನೇರವಾಗಿ ದನದ ಕೊಟ್ಟಿಗೆಗೆ ಬಂದು ಅಟ್ಟಬಿಟ್ಟು ಕೆಳಗಿಳಿಯಲು ಹೇಳಿದ. ಇಳಿದು ಬಂದೆ. ಚಿಕ್ಕಪ್ಪ ಮನೆಗೆ ಕರೆದುಕೊಂಡು ಹೋದ.

ಅಜ್ಜ ಅದೇ ತಾನೆ ಪ್ರಾರ್ಥನೆ ಮಾಡಿ ಮುಗಿಸಿದ್ದರು. ಕಣ್ಣು ಬಿಟ್ಟೊಡನೆಯೇ ಅವರ ಮುಂದೆ ನಾನು ನಿಂತಿದ್ದದ್ದು ಕಾಣಿಸಿತು. ಆನಂದದಿಂದ ನನ್ನನ್ನೆತ್ತಿ ಎದೆಗವಚಿಕೊಂಡು ಹೇಳಿದರು – " ದೇವರಿಗೆ ನನ್ನ ಮೊರೆ ಕೇಳಿಸಿತು. ನಿನ್ನನ್ನು ನಮಗೆ ವಾಪಸು ಕೊಟ್ಟ."





## ದೇವರು ಕೊಟ್ಟ ಬಹುಮಾನ

ಅಜ್ಜ ಮಹಾ ದೈವಭಕ್ತರು. ದಿನಕ್ಕೆ ಅನೇಕ ಸಲ ದೇವರ ಪ್ರಾರ್ಥನೆ ಮಾಡುತ್ತಿದ್ದರು. ಗುಡಿಗೆ ಹೋಗಿ ದೇವರಿಗೆ ಪೂಜೆ ಸಲ್ಲಿಸಿ ಬರುತ್ತಿದ್ದರು. ಆಗಾಗ್ಗೆ ತೀರ್ಥ ಸ್ಥಳಗಳಿಗೆ ಯಾತ್ರೆ ಹೋಗಿ ಬರುತ್ತಿದ್ದರು.

ನಮ್ಮ ಹಳ್ಳಿಯಲ್ಲೂ ಅದರ ಸುತ್ತುಮುತ್ತಲಿನಲ್ಲೂ ಹಲವಾರು ದೇವಸ್ಥಾನಗಳಿದ್ದವು. ಮನೆತನದ ಒಳ್ಳೆಯದಕ್ಕಾಗಿ ಇವುಗಳಲ್ಲಿ ಹಲವದರಲ್ಲಿ ಪೂಜೆ ನಡೆಯುವಂತೆ ಅಜ್ಜ ಏರ್ಪಾಡು ಮಾಡಿದ್ದರು. ಪ್ರತಿ ಶುಕ್ರವಾರವೂ ಯಾವುದಾದರೊಂದು ದೊಡ್ಡ ದೇವಸ್ಥಾನದಲ್ಲಿ ನನ್ನ ಶ್ರೇಯಸ್ಸಿಗಾಗಿ ವಿಶೇಷ 'ಸೇವೆ' ನಡೆಯುತ್ತಿತ್ತು. ಆ ದಿನ ಅಜ್ಜನ ಜೊತೆಗೆ ನಾನೂ ದೇವಸ್ಥಾನಕ್ಕೆ ಪೂಜೆ ಸಲ್ಲಿಸಲು ಹೋಗಬೇಕಾಗುತ್ತಿತ್ತು.



ದೇವಸ್ಥಾನಕ್ಕೆ ಹೋಗುವುದೆಂದರೆ ನನಗೆ ಇಷ್ಟ. ಅಲ್ಲಿ ಎಷ್ಟೊಂದು ಒಳ್ಳೆಯದೆಲ್ಲವೂ ನೋಡಲು ಸಿಗುತ್ತಿತ್ತು : ಇತರ ಕಟ್ಟಡಗಳಿಗಿಂತ ಬೇರೆ ತೆರನಾಗಿದ್ದ ಅಂದವಾದ ಗುಡಿಯ ಕಟ್ಟಡ. ಸಂಜೆಯ ಹೊತ್ತು ಹಚ್ಚಿಟ್ಟಿರುತ್ತಿದ್ದ ನೂರಾರು ಎಣ್ಣೆಯ ದೀಪಗಳು. ಹೂಗಳು, ಹೂವಿನ ಹಾರಗಳು. ಸಂಗೀತ, ಶಂಖದ ಮೊಳಗು, ಘಂಟೆಯ ನಾದ. ನೀಟಾಗಿ ಬಟ್ಟೆ ತೊಡಿಸಿ, ಸುಂದರ ಆಭರಣಗಳಿಂದ ಅಲಂಕಾರ ಮಾಡಿದ ದೇವರ ಪ್ರತಿಮೆ.

ವಿಶೇಷ ಸೇವೆ ನಡೆಯುತ್ತಿದ್ದುದು ಸಂಜೆ, ಇಳಿಹೊತ್ತಿನ ಮೇಲೆ. ನಮ್ಮ ಪೂಜೆಯ ಸಮಯ ಬಂದಾಗ ಗರ್ಭಗುಡಿಯ ಮುಚ್ಚಿದ ಬಾಗಿಲ ಮುಂದೆ ಕಾಯುತ್ತಿದ್ದೆವು. ಕೊಂಚ ಹೊತ್ತಿನಲ್ಲಿಯೇ ಘಂಟೆ ಬಾರಿಸಿ, ಶಂಖ ಊದುತ್ತಿದ್ದರು. ಗರ್ಭಗುಡಿಯ ಬಾಗಿಲು

ತೆರೆಯುತ್ತಿತ್ತು. ಅದು ನಮ್ಮ ಪೂಜೆಯ ಸಮಯ. ಅಜ್ಜ ಅತ್ಯಂತ ಭಕ್ತಿ ನಮ್ರತೆಗಳಿಂದ ಅಡ್ಡ ಬೀಳುತ್ತಿದ್ದರು. ತಮ್ಮ ಮೊಮ್ಮಗನಿಗೆ –ಅಂದರೆ ನನಗೆ– ಎಲ್ಲ ಅನುಗ್ರಹಗಳನ್ನೂ ಕರುಣಿಸುವಂತೆ ದೇವರಲ್ಲಿ ಮೊರೆಯಿಡುತ್ತಿದ್ದರು. ನಾನೂ ಪ್ರಾರ್ಥನೆ ಮಾಡುತ್ತಿದ್ದೆ. ಆದರೆ ದೊಡ್ಡದು ಯಾವುದನ್ನೂ ಕೊಡುವಂತೆ ದೇವರನ್ನು ಕೇಳಿಕೊಳ್ಳುತ್ತಿರಲಿಲ್ಲ. ಆ ಹೊತ್ತಿಗೆ ನನಗೆ ಬೇಕಾಗಿದ್ದ ಏನಾದರೊಂದು ಸಣ್ಣ ಪುಟ್ಟದನ್ನು ಕೇಳುತ್ತಿದ್ದೆ. ನಾನು ಕೇಳಿದ್ದೊಂದೂ ಸಿಗುತ್ತಿರಲಿಲ್ಲ. ಒಂದು ಸಲ ಮಾತ್ರ ದೇವರು ಅದನ್ನು ಕರುಣಿಸಿದನೆಂದು ಕಾಣುತ್ತದೆ.

ಒಂದು ಸಂಜೆ ಅಜ್ಜನೂ ನಾನೂ ದೇವಸ್ಥಾನಕ್ಕೆ ಹೋಗುತ್ತಿದ್ದೆವು. ಹಾದಿಯಲ್ಲಿದ್ದ ಗುಡಿಯ ಕೊಳದಲ್ಲಿ ಸ್ನಾನ ಮಾಡಿದೆವು. ಸ್ನಾನ ಮುಗಿಸಿ ಬರುವಾಗ ಮರಳಿನ ಮೇಲೆ ಅದೇನೋ ಥಳಥಳನೆ ಹೊಳೆಯುತ್ತಿದ್ದದ್ದು ಕಾಣಿಸಿತು. ಕೈಗೆತ್ತಿಕೊಂಡೆ. ನೋಡಿದರೆ ಒಂದು ಬೆಳ್ಳಿಯ ರೂಪಾಯಿ ನಾಣ್ಯ. ಸಂತೋಷವಾಯಿತು. ಇದು ದೇವರು ಕೊಟ್ಟ ಬಹುಮಾನ ಅಂದುಕೊಂಡೆ.

ದೇವಸ್ಥಾನ ತಲಪಿದಾಗ ಅಜ್ಜನಿಗೆ ಬಹುಮಾನದ ವಿಷಯ ಹೇಳಿದೆ. ಎಲ್ಲಿ ಸಿಕ್ಕಿತೆಂದು ಕೇಳಿದರು. ದೇವರು ಅದನ್ನು ನನಗೋಸ್ಕರವಾಗಿಯೇ ಮರಳಿನ ಮೇಲೆ ಬಿಟ್ಟು ಹೋಗಿದ್ದನೆಂದು ಹೇಳಿದೆ. ಅಜ್ಜ ಹೆಚ್ಚೇನೂ ಹೇಳಲಿಲ್ಲ.

ಒಳಗೆ ಹೋಗಿ ಪೂಜೆ ಸಲ್ಲಿಸಿದೆವು. ಪೂಜೆ ಮುಗಿದ ಮೇಲೆ ಅಜ್ಜ ನನ್ನ ಕಡೆ ತಿರುಗಿ "ಎಲ್ಲಿ, ಆ ರೂಪಾಯಿ ಕೊಡು" ಅಂದರು.



ಕೊಡಲು ಮನಸ್ಸು ಬರಲಿಲ್ಲ. "ಕೊಡೋ" ಎಂದು ಅಪ್ಪಣೆ ಮಾಡಿದರು. ದೇವರು ಕೊಟ್ಟ ಬಹುಮಾನವನ್ನು ಕೈಬಿಡಬೇಕಾಗಿ ಬಂತು. ಅಜ್ಜ ರೂಪಾಯಿ ತೊಗೊಂಡು ದೇವಸ್ಥಾನದ ಅರ್ಚಕರಿಗೆ ಕೊಟ್ಟುಬಿಟ್ಟರು.

ಅಜ್ಜನ ಮೇಲೆ ಕೋಪ ಬಂತು. ಮನೆ ತಲುಪುವ ವರೆಗೂ ಅವರ ಕೂಡ ಮಾತಾಡಲಿಲ್ಲ. ಮನೆ ಸೇರಿದ ಮೇಲೆ ನನ್ನ ಕಡೆ ತಿರುಗಿ ಕೇಳಿದರು– "ಯಾಕೋ ಮಂಕಾಗಿದ್ದಿಯಲ್ಲ. ಏನು ಸಮಾಚಾರ? ಆ ರೂಪಾಯಿಗೋಸ್ಕರವೋ?"

ನಾನು ಏನೂ ಜವಾಬು ಕೊಡಲಿಲ್ಲ.

ಆ ಮೇಲೆ ಅವರಂದರು– "ನಿನಗೆ ಸಿಕ್ಕಿದ್ದ ರೂಪಾಯಿ ದೇವರು ಕೊಟ್ಟ ಬಹುಮಾನವಲ್ಲ. ಯಾರೋ ಕಳೆದುಕೊಂಡದ್ದು. ದೇವರೆಂದೂ ಆ ರೀತಿ ಬಹುಮಾನ ಕೊಡೋದಿಲ್ಲ. ಮೈ ಮುರಿದು ದುಡಿದರೆ ತುಂಬ ತುಂಬ ರೂಪಾಯಿ ಸಂಪಾದಿಸಲು ಸಹಾಯ ಮಾಡುತ್ತಾನೆ. ನೀನೇ ಸಂಪಾದಿಸದ ಹಣವನ್ನು ಎಂದಿಗೂ ಮುಟ್ಟಬಾರದು."



## ಚಿರುತಳ ಪ್ರೀತಿ

ಚಿರುತಳೂ ಅವಳ ಗಂಡನೂ ನಮ್ಮ ಮನೆಯ ಸಮೀಪದಲ್ಲಿದ್ದ ಒಂದು ಸಣ್ಣ ಗುಡಿಸಲಿನಲ್ಲಿ ವಾಸಿಸುತ್ತಿದ್ದರು. ಆ ಜನ ಬಡವರು. ಅವರನ್ನು ಹರಿಜನರೆಂದು ಕರೆಯುತ್ತಿದ್ದರು. ಅವರು ನಮ್ಮನ್ನು ಮುಟ್ಟಿಸಿಕೊಳ್ಳುವಂತಿರಲಿಲ್ಲ; ನಮ್ಮ ಮನೆಯೊಳಗೆ ಕಾಲಿಡುವಂತೆಯೂ ಇರಲಿಲ್ಲ. ಆದರೂ ಚಿರುತ ನಮ್ಮ ಸಂಸಾರದಲ್ಲಿ ಒಬ್ಬಳಾಗಿದ್ದಳು. ಅಜ್ಜಿಗೆ ಅವಳಿಂದ ತುಂಬ ಸಹಾಯ ಒದಗುತ್ತಿತ್ತು. ದಿನವೂ ಪೇಟೆಗೆ ಹೋಗಿ ಮನೆಗೆಲಸಕ್ಕೆ ಬೇಕಾದ ಸಾಮಾನುಗಳನ್ನು ತಂದುಕೊಡುತ್ತಿದ್ದಳು. ಅಜ್ಜಿ ತನ್ನ ಆಡಳಿತದಲ್ಲಿ ಉಳಿಸಿಟ್ಟಿದ್ದ ಅಕ್ಕಿ, ತೆಂಗಿನಕಾಯಿಗಳನ್ನು ಮಾರಿಕೊಡುತ್ತಿದ್ದಳು.

ಮೈಬಣ್ಣ ಕಪ್ಪಾದರೂ ಚಿರುತಳು ನೋಡುವುದಕ್ಕೆ ಚೆಲುವಾಗಿಯೂ ಶುಚಿಯಾಗಿಯೂ ಇದ್ದಳು. ಅವಳು ಯಾವಾಗಲೂ ತೊಡುತ್ತಿದ್ದುದು ಬಿಳಿಯ ಬಟ್ಟೆಗಳನ್ನೇ.

ಚಿರುತಳಿಗೆ ಮಕ್ಕಳಿರಲಿಲ್ಲ. ಆ ಕೊರತೆಯಿಂದ ಅವಳು ಕುಗ್ಗಿದ್ದಳು. ತನಗೊಂದು ಗಂಡು ಮಗುವಾಗಬೇಕೆಂದು ಅವಳ ಬಯಕೆ.

ನನ್ನನ್ನು ಕಂಡರೆ ಚಿರುತಳಿಗೆ ಅಪಾರ ಪ್ರೀತಿ. ನನಗೂ ಅವಳೆಂದರೆ ತುಂಬ ಇಷ್ಟವೇ. ಅವಳು ನನ್ನನ್ನು ಅದೆಷ್ಟೋ ಮುದ್ದು

ಹೆಸರುಗಳಿಂದ ಕರೆಯುತ್ತಿದ್ದಳು. ಯಾವತ್ತಾದರೂ ಒಂದು ದಿನ ನನ್ನನ್ನು ಎತ್ತಿಕೊಂಡು ಮುತ್ತಿಡುವುದಾಗಿ ಹೇಳುತ್ತಿದ್ದಳು. ಆದರೆ ಹಾಗೇಕೆ ಮಾಡುತ್ತಿರಲಿಲ್ಲವೋ ಕಾಣೆ.

ಒಂದು ದಿವಸ ನಾನು ತೋಟದಲ್ಲಿ ನಿಂತಿದ್ದಾಗ ಚಿರುತ ಆ ಕಡೆ ಹಾದು ಹೋಗುತ್ತಿದ್ದಳು. ನನ್ನನ್ನು ಕಂಡ ತಕ್ಷಣ ನಿಂತು ಸುತ್ತಲೂ ನೋಡಿದಳು. ಹತ್ತಿರದಲ್ಲಿ ಯಾರೂ ಇರಲಿಲ್ಲ. ನನ್ನ ಬಳಿ ಬಂದು ನನ್ನನ್ನೆತ್ತಿ ಎದೆಗವಚಿಕೊಂಡು ಗಲ್ಲದ ಮೇಲೆ ಮುತ್ತಿಟ್ಟಳು.

ತಕ್ಷಣ ಯಾರೋ ಕೂಗಿದ್ದು ಕೇಳಿಸಿತು. ಅದು ಅಜ್ಜನ ಧ್ವನಿ. ಚಿರುತಳಿಗೆ ದಿಗಿಲಾಯಿತು. ನನ್ನನ್ನು ನೆಲದ ಮೇಲೆ ಕುಕ್ಕಿ ಓಡಿ ಹೋದಳು. ಅಜ್ಜ ದೊಣ್ಣೆ ಹಿಡಿದು ಅವಳ ಬೆನ್ನಟ್ಟಿ ಹೋಗುತ್ತಿದ್ದುದು ಕಾಣಿಸಿತು. ಅವಳು ತಪ್ಪಿಸಿಕೊಂಡು ಹೋಗುವ ಮೊದಲು ಅಜ್ಜ ಅವಳಿಗೆ ಒಂದೆರಡು ಏಟು ಬಿಗಿದರು.

ಕೋಪದಲ್ಲಿ ಬಾಯಿಗೆ ಬಂದಂತೆ ಅರಚುತ್ತ ಅಜ್ಜ ಹಿಂದಿರುಗಿದರು.

ಅಜ್ಜಿ ಹೊರಗೆ ಬಂದು, "ಏನಾಯಿತು ಅಂದ್ರೆ? ಹೀಗೇಕೆ ಕೂಗಾಡುತ್ತಿದ್ದೀರಿ?" ಎಂದು ಕೇಳಿದಳು.

ಅಜ್ಜ ಅಬ್ಬರಿಸಿದರು— "ನೀನು, ನೀನೇ ಕಾರಣ ಇದಕ್ಕೆಲ್ಲಾ. ಆ ಹೆಂಗಸು ಚಿರುತಳನ್ನು ಇಲ್ಲಿಯ ತನಕ ಬರಲು ಬಿಟ್ಟವಳು ನೀನೇ ಅಲ್ಲವೆ? ಈಗ ಏನು ಮಾಡಿದಳು ನೋಡು. ರಾಜನನ್ನು ಎತ್ತಿಕೊಂಡು ಬಿಟ್ಟಳು. ನೀನೂ ಮನೆಬಿಟ್ಟು ನಡಿ. ಆ ಚಿರುತ ನಿನಗೆ ಬೇಕಾದವಳಾದರೆ, ಹೋಗಿ ಅವಳ ಜೊತೆಯೇ ಇರು. ಮಗುವನ್ನು ನಾನೇ ನೋಡಿಕೊಳ್ಳುತ್ತೇನೆ."

"ಇಷ್ಟೆಲ್ಲಾ ಕೂಗಾಡುವಂಥಾದ್ದು ಏನಾಗಿದೆ ಈಗ? ಚಿರುತ ರಾಜನನ್ನು ಮುಟ್ಟಿಸಿಕೊಂಡಿದ್ದರೆ ಅವನಿಗೆ ಹೋಗಿ ಮಡಿ ಉಟ್ಟುಕೋ ಅನ್ನಿ. ಅಲ್ಲಿಗೆ ಮಾತು ಮುಗಿಯಿತು"— ಅಜ್ಜಿ ಹೇಳಿದಳು.

ಅಜ್ಜ ಬಂದು ನನ್ನ ಕೈಹಿಡಿದು ದರದರನೆ ಕೊಳಕ್ಕೆ ಎಳೆದುಕೊಂಡು ಹೋದರು. ಇಬ್ಬರೂ ನೀರಿನಲ್ಲಿ ಮುಳುಗು ಹಾಕಿದೆವು. ಹರಿಜನ ಹೆಂಗಸನ್ನು ಮುಟ್ಟಿಸಿಕೊಂಡಿದ್ದ 'ಪಾಪ' ಅಲ್ಲಿಗೆ ತೊಳೆದು ಹೋಯಿತು.

ಚಿರುತಳ ಬಗ್ಗೆ ನನಗೆ 'ಅಯ್ಯೋ' ಅನ್ನಿಸಿತು. ಅವಳು ಏನೂ ತಪು ಮಾಡಿರಲಿಲ್ಲ. ಅವಳು ಎತ್ತಿಕೊಂಡು ಮುತ್ತಿಟ್ಟಾಗ ನನಗೆ ಸಂತೋಷವೇ ಆಗಿತ್ತು. ನನ್ನ ಮೇಲೆ ಅವಳಿಗಿದ್ದ ಪ್ರೀತಿ ತಾಯಿಯ ಪ್ರೀತಿ. ನನ್ನನ್ನು ಮನೆಯಲ್ಲಿ ಎಲ್ಲರೂ ಪ್ರೀತಿಸುತ್ತಿದ್ದರು, ನಿಜ. ಆದರೆ ಚಿರುತಳದ್ದು ಅವರೆಲ್ಲರ ಪ್ರೀತಿಗಿಂತ ಒಂದು ಕೈ ಹೆಚ್ಚು ಎಂದು ನನಗೆ ಅನ್ನಿಸುತ್ತಿತ್ತು.

ಮಾರನೆಯ ಬೆಳಿಗ್ಗೆ ಚಿರುತಳಿಗಾದ ಗತಿಯನ್ನು ಚಿಕ್ಕಪ್ಪನಿಗೆ ವರದಿ ಮಾಡಿದೆ. ಅಜ್ಜನ ಕೈಯಲ್ಲಿ ಹೊಡೆತ ತಿಂದು ಈಗ ಅವಳ ಸ್ಥಿತಿ ಹೇಗಿದೆಯೋ ಎಂದು ತಿಳಿಯುವ ಕಾತರವಾಯಿತು. ಚಿಕ್ಕಪ್ಪ ಚಿಂತಿಸಬೇಡ ಅಂದ. "ಇಂಥ ಕೆಟ್ಟ ಪದ್ಧತಿಗಳಿನ್ನೂ ನಮ್ಮಲ್ಲಿ ಉಳಿದು ಕೊಂಡಿವೆ. ಆದರೆ ಪ್ರಪಂಚ ಬೇಗನೆ ಬದಲಾಗುತ್ತಿದೆ" ಎಂದೂ ಹೇಳಿದ. ಅವನ ಮಾತಿನ ಅರ್ಥ ನನಗೆ ತಿಳಿಯಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ಚಿಕ್ಕಪ್ಪ ಬಂದು, "ತಿರುಗಾಡಿಕೊಂಡು ಬರೋಣ, ಬರ್ತೀಯಾ?" ಎಂದು ಕೇಳಿದ. ಸಂತೋಷದಿಂದ 'ಹೂ' ಅಂದೆ. ಇಬ್ಬರೂ ಹೊರಟೆವು. ಕೆಲವರು ಗುರುತಿನವರ ಮನೆಗೆ ಹೋಗಿ, ವಾಪಸು ಬರುವಾಗ ಚಿರುತಳ ಗುಡಿಸಲಿನ ಮುಂದೆ ಹಾದು ಬಂದೆವು.



ಚಿರುತ ಒಳಗಿದ್ದಳು. ಚಿಕ್ಕಪ್ಪ ಅವಳಿಗೆ ಕೂಗಿ ಹೇಳಿದ– "ರಾಜ ಇಲ್ಲಿದ್ದಾನೆ. ನಿನ್ನನ್ನು ನೋಡಲು ಒಳಗೆ ಬರುತ್ತಿದ್ದಾನೆ."

"ಬೇಡಿ, ಬೇಡಿ. ಒಳಗೆ ಬರಬೇಡಿ. ನೀವು ಬಂದರೆ ನನಗೆ ಮತ್ತೆ ತೊಂದರೆಯಾಗುತ್ತೆ"– ಚಿರುತ ಅರಚಿದಳು.

"ನಿನ್ನ ಹತ್ತಿರ ಕರೆದುಕೊಂಡು ಹೋಗುವಂತೆ ರಾಜನೇ ಹೇಳಿದ. ಅವನನ್ನು ನೀನೇ ವಿಚಾರಿಸಿಕೋ" ಚಿಕ್ಕಪ್ಪ ಅಂದ.

"ದಮ್ಮಯ್ಯ ಒಳಗೆ ಬರಬೇಡ, ನನ್ನ ಚಿನ್ನ ಮರಿ. ಯಾರ ಕಣ್ಣಿಗಾದರೂ ಬೀಳುವ ಮೊದಲು ಇಲ್ಲಿಂದ ಹೊರಟು ಹೋಗು" ಎಂದವಳೇ ಚಿರುತ ಅಳತೊಡಗಿದಳು.

"ಒಳಗೆ ಹೋಗು, ರಾಜ. ಚಿರುತ ದುಃಖದಲ್ಲಿದ್ದಾಳೆ. ಅವಳ ದುಃಖವನ್ನು ತೊರೆಯಬಲ್ಲವನು ನೀನೊಬ್ಬನೇ"–ಚಿಕ್ಕಪ್ಪ ಅಂದ.

"ಬೇಡಿ, ಒಳಗೆ ಕಳಿಸಬೇಡಿ"–ಚಿರುತ ಅಳುತ್ತಲೇ ಹೇಳಿದಳು. "ನಾವು ಅಸ್ಪೃಶ್ಯರು. ನಮ್ಮ ಮನೆಯೊಳಗೆ ಕಾಲಿಡುವುದು ಪಾಪ."

"ಅಳಬೇಡ, ಚಿರುತಮ್ಮ"– ಚಿಕ್ಕಪ್ಪ ಸಮಾಧಾನ ಮಾಡಿದ. "ಮಗುವಿಗೆ ನೀನು ಎಂದರೆ ತುಂಬ ಪ್ರೀತಿ. ನಿನ್ನ ಕೈಯಲ್ಲಿ ಎತ್ತಿಸಿಕೊಳ್ಳಲು ಆಸೆ" ಎನ್ನುತ್ತ ಚಿಕ್ಕಪ್ಪ ನನ್ನನ್ನು ಗುಡಿಸಲಿನೊಳಕ್ಕೆ ತಳ್ಳಿದ.

"ಇಲ್ಲ, ಇಲ್ಲ. ಮತ್ತೆ ಎಂದೆಂದಿಗೂ ಹಾಗೆ ಮಾಡುವುದಿಲ್ಲ. ನಿಮ್ಮ ದಮ್ಮಯ್ಯ, ಹೊರಟುಹೋಗಿ. ದೊಡ್ಡ ದಣೀರು ನೀವು ಇಲ್ಲಿರುವುದನ್ನು ಕಂಡರೆ ನನ್ನನ್ನು ಸಿಗಿದು ಹಾಕಿಯಾರು."

ಒಳಗೆ ಹೋದೆ. ಚಿರುತ ಇನ್ನೂ ಅಳುತ್ತಲೇ ಇದ್ದಳು. ಅವಳು ಅಳುವುದನ್ನು ನನ್ನಿಂದ ನೋಡಲಾಗಲಿಲ್ಲ. ನನಗೂ ಅಳುಬಂತು.

ಚಿರುತ ನಾನು ಅಳುತ್ತಿರುವುದನ್ನು ಕಂಡಳು. ತಕ್ಷಣ ಕಣ್ಣೊರಸಿಕೊಂಡು ಚಿಕ್ಕಪ್ಪನ ಕಡೆ ನೋಡಿದಳು, ಮತ್ತೆ ನನ್ನ ಕಡೆ ನೋಡಿದಳು. ಆ ಮೇಲೆ ನನ್ನನ್ನು ಎತ್ತಿಕೊಂಡು, ಬಿಗಿಯಾಗಿ ಎದೆಗೆ ಅವಚಿಕೊಂಡು ಮತ್ತೆ ಮತ್ತೆ ಮುತ್ತಿಟ್ಟಳು. ಸ್ವತಃ ನಮ್ಮಮ್ಮನೇ ನನ್ನನ್ನು ಮುದ್ದಾಡುತ್ತಿದ್ದಾಳೆಂದು ನನಗನ್ನಿಸಿತು.

ಚಿರುತಳ ಜೊತೆ ನಾನಿದ್ದದ್ದು ಸ್ವಲ್ಪ ಹೊತ್ತು ಮಾತ್ರ. ಏಕೆಂದರೆ "ಇನ್ನು ಹೋಗು, ನನ್ನ ಹೊಂಗರುವೆ. ದೊಡ್ಡ ದಣಿಗಳಿಗೆ ನೀವು ಇಲ್ಲಿರುವುದು ಗೊತ್ತಾಗುವ ಮೊದಲು ಮನೆ ಸೇರಿಕೋ" ಎಂದು ಹೇಳಿ ಕಳಿಸಿಬಿಟ್ಟಳು.

ನಾವು ಮನೆಗೆ ಹಿಂತಿರುಗಿದೆವು. ಚಿರುತಳ ಗುಡಿಸಲಿಗೆ ನಾನು ಮತ್ತೆ ಯಾವಾಗಲೂ ಹೋಗಲಿಲ್ಲ. ಆದರೆ ಸಾಧಾರಣವಾಗಿ ಪ್ರತಿದಿನವೂ ಅವಳನ್ನು ನೋಡುತ್ತಿದ್ದೆ. ನನ್ನನ್ನು ಕಂಡಾಗಲೆಲ್ಲಾ ಅವಳ ಕಣ್ಣುಗಳಲ್ಲಿ ಅದೇ ಪ್ರೀತಿ ತುಂಬಿ ಹರಿಯುತ್ತಿತ್ತು.

ಅವಳನ್ನು ಕಂಡು ಮಾತಾಡುವುದೆಂದರೆ ನನಗೇನೋ ಆಸೆ. ಆದರೆ ಅವಳನ್ನು ಏಕೆ ಮುಟ್ಟಿಸಿಕೊಳ್ಳಬಾರದೆಂದು ಮಾತ್ರ ನನಗೆ ತಿಳಿಯುತ್ತಿರಲಿಲ್ಲ.

# ಭಾರೀ ಅತಿಥಿ

ಒಂದು ಸಲ ನಮ್ಮ ಮನೆಗೆ ಒಬ್ಬ ಭಾರೀ ಅತಿಥಿಯ ಆಗಮನವಾಗಿತ್ತು. ಆ ಅತಿಥಿಯೆಂದರೆ ಒಂದು ಹೆಣ್ಣಾನೆಯ ಮರಿ; ಹೆಸರು ಲಕ್ಷ್ಮಿ. ಅದು ನಮ್ಮ ಶ್ರೀಮಂತ ಸಂಬಂಧಿಕರೊಬ್ಬರಿಗೆ ಸೇರಿದ್ದು. ಸ್ವಲ್ಪ ದಿನ ಅದನ್ನು ನಮ್ಮ ಮನೆಯಲ್ಲಿ ಬಿಟ್ಟಿರಬೇಕೆಂದು ಅವರ ಇಚ್ಛೆ. ಆದರೆ ಅಜ್ಜನಿಗೆ ಅದು ಅಷ್ಟಾಗಿ ಇಷ್ಟವಾಗಲಿಲ್ಲ. ಮರಿಯಾದರೇನಂತೆ, ಆನೆ ಆನೆಯೇ. ಅದರ ಹೊಟ್ಟೆಗೆ ಹಾಕಿ ಪೂರೈಸುವುದು ಖರ್ಚಿನ ಬಾಬತ್ತು. ಆದರೆ ಅಜ್ಜ ನೆಂಟರ ಕೋರಿಕೆಗೆ ಇಲ್ಲವೆನ್ನುವುದು ಹೇಗೆ?

ಲಕ್ಷ್ಮಿ ಬರುವ ವಿಷಯ ತಿಳಿದು ನನ್ನ ಸಂಭ್ರಮಕ್ಕೆ ಎಣೆಯಿಲ್ಲ. ಅದನ್ನು ಎದುರುಗೊಳ್ಳುವುದು ಹೇಗೆಂದು ಎಲ್ಲರನ್ನೂ ಕೇಳಿದೆ. ಆನೆಗಳಿಗೆ ಕಬ್ಬು ಇಷ್ಟ, ಲಕ್ಷ್ಮಿಗೂ ಸ್ವಲ್ಪ ಇಟ್ಟಿರು ಎಂದು ಅಜ್ಜಿ ಹೇಳಿದಳು.

ಒಂದು ಸಂಜೆ ಮಾವುತ ಕಿಟ್ಟುವಿನ ಜೊತೆಗೂಡಿ ಲಕ್ಷ್ಮಿ ಮನೆಗೆ ಬಂದಿತು. ಅದನ್ನು ಸ್ವಾಗತಿಸಲು ಮನೆಯವರೆಲ್ಲರೂ ಹೊರಬಂದರು. ಲಕ್ಷ್ಮಿ ಇನ್ನೂ ಮರಿ, ನೋಡಲು ಲಕ್ಷಣವಾಗಿತ್ತು.

"ಅದಿನ್ನೂ ಚಿಕ್ಕದು, ಇನ್ನೂ ಎಂಟು ವರ್ಷ ಕೂಡ ಆಗಿಲ್ಲ. ಬುದ್ಧಿ ಚುರುಕಾಗಿದೆ. ಏನನ್ನೇ ಆಗಲಿ ಬೇಗನೆ ಕಲಿತುಕೊಳ್ಳುತ್ತದೆ. ತುಂಬಾ ಮುದ್ದಿನ ಸ್ವಭಾವ. ಜನರೊಡನೆ ಆಟವಾಡುವುದೆಂದರೆ ಅದಕ್ಕೆ ಇಷ್ಟ"– ಎಂದೆಲ್ಲಾ ಕಿಟ್ಟು ಹೇಳಿದ. ಕಿಟ್ಟು ಲಕ್ಷ್ಮಿಯ ಬಗ್ಗೆ ಎಷ್ಟೊಂದು ಒಳ್ಳೆಯ ಮಾತಾಡಿದನೆಂದರೆ ಅದು ಅವನ ಮಗಳೆಯೋ ಎಂಬ ಭಾವನೆ ಬಂತು.

ನನ್ನ ಹತ್ತಿರ ಒಂದು ಕಬ್ಬಿನ ತುಂಡಿತ್ತು. ಅದನ್ನು ಲಕ್ಷ್ಮಿಗೆ ಕೊಡಬೇಕು ಅನ್ನಿಸಿತು. ಆದರೆ ಅದರ ಬಳಿ ಹೋಗಲು ಭಯ. ನಾನು ಕಬ್ಬು ಹಿಡಿದುಕೊಂಡು ನಿಂತಿದ್ದನ್ನು ಕಿಟ್ಟು ನೋಡಿದ. "ಇದಕ್ಕೆ ಮಕ್ಕಳೆಂದರೆ ಪ್ರೀತಿ" ಅನ್ನುತ್ತಾ ನನ್ನನ್ನು ಲಕ್ಷ್ಮಿಯ ಹತ್ತಿರ ಕರೆದುಕೊಂಡು ಹೋದ. ಕಬ್ಬಿನ ತುಂಡನ್ನು ಮುಂದೆ ಚಾಚಿದ. ಲಕ್ಷ್ಮಿ ಅದನ್ನು ಸೊಂಡಿಲಿನಿಂದ ಬಾಚಿಕೊಂಡು ತಿಂದಿತು.

ರಾತ್ರಿ ಲಕ್ಷ್ಮಿಯನ್ನು ಮನೆಯಂಗಳದಲ್ಲಿ ಒಂದು ಮರಕ್ಕೆ ಕಟ್ಟಿ ಹಾಕಿದ್ದರು. ಅದನ್ನು ನೋಡುತ್ತ ನಾನು ಬಹಳ ಹೊತ್ತು ಅಲ್ಲೇ ಕುಳಿತ್ತಿದ್ದೆ. ಅಜ್ಜಿ ಬಂದು "ಸಾಕು ನಡಿಯೋ, ರಾಜ. ಹೋಗಿ ಮಲಗಿಕೋ. ಆನೆಯನ್ನು ನಾಳೆ ಬೆಳಿಗ್ಗೆ ನೋಡಿದರಾಯಿತು" ಅಂದರು. ಇಲ್ಲದಿದ್ದರೆ ಇನ್ನು ಎಷ್ಟು ಹೊತ್ತು ಅಲ್ಲಿಯೇ ಇರುತ್ತಿದ್ದೆನೋ.

ಬೆಳಿಗ್ಗೆ ಹೊತ್ತಿಗೆ ಮುಂಚೆ ಎದ್ದು ಹೊರ ಬಂದೆ. ಲಕ್ಷ್ಮಿ ನನ್ನನ್ನು ನೋಡಿ ಸ್ವಾಗತ ಬಯಸುವಂತೆ ಸೊಂಡಿಲು ಅಲ್ಲಾಡಿಸಿತು.



ಅದರ ಹತ್ತಿರ ಹೋಗಲು ನನಗಿನ್ನೂ ಭಯವೇ. ಲಕ್ಷ್ಮಿಯೇ ನನ್ನ ಬಳಿ ಬರಲು ಪ್ರಯತ್ನಿಸಿತು. ಆದರೆ ಮರಕ್ಕೆ ಕಟ್ಟಿ ಹಾಕಿದ್ದ ಕಾರಣ ಅದಕ್ಕೆ ಬರಲಾಗಲಿಲ್ಲ.

ಬೆಳಕು ಹರಿದ ಮೇಲೆ ಕಿಟ್ಟು ಬಂದ. ಮೈ ತೊಳೆಸಿ ಬರಲು ಲಕ್ಷ್ಮಿಯನ್ನು ಕರೆದುಕೊಂಡು ಹೊರಟ. ಆನೆ ಸ್ನಾನ ಮಾಡುವುದನ್ನು ನಾನು ಯಾವಾಗಲೂ ನೋಡಿರಲಿಲ್ಲ. ಅವರನ್ನು ಹಿಂಬಾಲಿಸಿ ನಾನೂ ಕೊಳಕ್ಕೆ ಹೋದೆ. ಮೊದಲು ಲಕ್ಷ್ಮಿಯೊಂದೇ ನೀರಿಗಿಳಿಯಿತು. ನೀರಿನಲ್ಲಿ ಆಟವಾಡಿತು. ಸೊಂಡಿಲಿನಿಂದ ನೀರೆತ್ತಿಕೊಂಡು ಅನೇಕ ಸಲ ಮೈಮೇಲೆ ಎರಚಿಕೊಂಡಿತು. ಆಮೇಲೆ ಕಿಟ್ಟು ನೀರಿಗಿಳಿದ. ಲಕ್ಷ್ಮಿಗೆ ಕುಳಿತುಕೊಳ್ಳಲು ಹೇಳಿದ. ಲಕ್ಷ್ಮಿ ಸೊಂಡಿಲಿನಲ್ಲಿ ನೀರು ತುಂಬಿಕೊಂಡು ಕಿಟ್ಟುವಿನ ಕಡೆ ನೋಡಿತು "ಬೇಡಾ, ಹಾಗೆ ಮಾಡಬೇಡ" ಎಂದು ಕಿಟ್ಟು ಹೇಳಿದ. ಲಕ್ಷ್ಮಿ ಕೇಳಲಿಲ್ಲ. ನೀರನ್ನೆಲ್ಲಾ ಕಿಟ್ಟುವಿನ ಮೇಲೆ ಚಿರುಕಿ ಹೊಡೆಯಿತು. ಕಿಟ್ಟು ಕೋಪಿಸಿಕೊಳ್ಳಲಿಲ್ಲ. ಕುಳಿತುಕೊಳ್ಳುವಂತೆ ಮತ್ತೆ ಹೇಳಿದ. ಲಕ್ಷ್ಮಿ ಸೊಂಡಿಲಿನಲ್ಲಿ ಪುನಃ ನೀರು ತುಂಬಿಕೊಂಡಿತು. ಕಿಟ್ಟು ಕೈಲಿದ್ದ ಬೆತ್ತ ತೋರಿಸಿ ಹಾಗೆಲ್ಲಾ ಚೇಷ್ಟೆ ಮಾಡಬಾರದೆಂದು ಎಚ್ಚರಿಕೆ ಕೊಟ್ಟ. ಲಕ್ಷ್ಮಿ ಈ ಸಲ ಅವನ ಮೇಲೆ ನೀರೆರಚಲಿಲ್ಲ. ಬದಲು ಜೋರಾಗಿ



ಹಿಂಬದಿಗೆ ಎರಚಿತು. ನಾನು ಲಕ್ಷ್ಮಿಯ ಹಿಂದೆಯೇ ನಿಂತಿದ್ದೆ. ನನ್ನ ಮೇಲೆಲ್ಲಾ ನೀರು ಸುರಿಯಿತು. ತುಂಬ ತಮಾಷೆಯಾಗಿತ್ತು. ಲಕ್ಷ್ಮಿ ಆಟವಾಡುತ್ತಿತ್ತು, ಅಷ್ಟೇ.

ಕಿಟ್ಟು ಲಕ್ಷ್ಮಿಯ ಕಿವಿ ಹಿಂಡಿ ಕುಳಿತುಕೊಳ್ಳುವಂತೆ ಅಪ್ಪಣೆ ಮಾಡಿದ. ಅದು ಹೇಳಿದ ಮಾತು ಕೇಳಿತು. ಕಿಟ್ಟು ಕಲ್ಲಿನಿಂದ ಉಜ್ಜಿ ಚೆನ್ನಾಗಿ ಅದರ ಮೈ ತೊಳೆದ. ವಾಪಸು ಬರವಾಗ ಕಿಟ್ಟು ನನ್ನನ್ನು ಲಕ್ಷ್ಮಿಯ ಮೇಲೆ ಹತ್ತಿ ಕೂರಿಸಿ ಸವಾರಿ ಮಾಡಿಸಿದ. ನನಗೆ ರೋಮಾಂಚವಾಯಿತು. ಮನೆ ತಲುಪುವಾಗ ಅಜ್ಜ, ಅಜ್ಜಿ ಎಲ್ಲರೂ ನಾನು ಆನೆ ಸವಾರಿ ಮಾಡುತ್ತ ಬರುವುದನ್ನು ನೋಡಲು ಬಾಗಿಲಲ್ಲಿ ಕಾಯುತ್ತ ನಿಂತಿದ್ದರು.

ಲಕ್ಷ್ಮಿಗೆ ಕಬ್ಬಿಗಿಂತ ಕಳಿತ ಬಾಳೆ ಹಣ್ಣು ಹೆಚ್ಚು ಪ್ರಿಯವೆಂದು ಕಿಟ್ಟು ಹೇಳಿದ್ದ. ಮನೆಯಲ್ಲಿ ಬಾಳೆಯ ಹಣ್ಣೇನೋ ಬೇಕಾದಷ್ಟಿತ್ತು. ಆದರೆ ಚೆನ್ನಾಗಿ ಕಳಿತ ಹಣ್ಣು ಇರುತ್ತಿದ್ದುದು ಉಗ್ರಾಣದಲ್ಲಿ. ಅಜ್ಜ ಒಬ್ಬರು ಮಾತ್ರ ಅದನ್ನು ತೆಗೆದು ಹಂಚುತ್ತಿದ್ದರು. ಸಮಯ ಕಾದು ಅಜ್ಜ ಹೊರಗೆ ಹೋದೊಡನೆಯೇ ಮೆಲ್ಲನೆ ಉಗ್ರಾಣಕ್ಕೆ ಕಾಲಿಟ್ಟೆ. ಒಂದು ದೊಡ್ಡ ಚಿಪ್ಪಿನಲ್ಲಿ ಅರ್ಧ ಮುರಿದು ಹೋಗಿ ಲಕ್ಷ್ಮಿಗೆ ಕೊಟ್ಟೆ. ಲಕ್ಷ್ಮಿ ಬಾಯಿ ಚಪ್ಪರಿಸುತ್ತ ತಿಂದಿತು.

ಬಾಳೆಹಣ್ಣು ಮಾಯವಾಗಿದ್ದುದು ಅಜ್ಜನ ಗಮನಕ್ಕೆ ಬಂತು. ಅದರ ಬಗ್ಗೆ ಎಲ್ಲರನ್ನೂ ವಿಚಾರಿಸಿದರು. ಕೊನೆಗೆ ಅದನ್ನು ತೆಗೆದುಕೊಂಡವನು ನಾನು ಎಂದು ಪತ್ತೆ ಹಚ್ಚಿದರು. ಅವರ ಅಪ್ಪಣೆಯಿಲ್ಲದೆ ಯಾರೂ ಏನನ್ನೂ ಮುಟ್ಟುವುದು ಅವರಿಗೆ ಸರಿಬೀಳು

ತ್ತಿರಲಿಲ್ಲ. ಕೈಯಲ್ಲಿ ಒಂದು ದೊಡ್ಡ ಬೆತ್ತ ಹಿಡಿದು 'ಬಾರೋ ಇಲ್ಲಿ' ಅಂದರು. ಅವರು ಹೊಡೆಯುವರೆಂದು ಗೊತ್ತಾಯಿತು. ಓಡಿದೆ, ಅಜ್ಜ ಅಟ್ಟಿಸಿಕೊಂಡು ಬಂದರು.

ಆಗ ಲಕ್ಷ್ಮಿಯನ್ನು ಮರಕ್ಕೆ ಕಟ್ಟಿ ಹಾಕಿರಲಿಲ್ಲ. ನಾನು ಓಡುತ್ತಿದ್ದದ್ದೂ ಅಜ್ಜ ನನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದದ್ದೂ ಅದಕ್ಕೆ ಕಣ್ಣಿಗೆ ಬಿತ್ತು. ಅದು ತಕ್ಷಣ ನನ್ನ ಸಹಾಯಕ್ಕೆ ಬಂತು. ಘೀಳಿಡುತ್ತಾ ಅಜ್ಜನ ಕಡೆ ನುಗ್ಗಿತು. ಅಜ್ಜನಿಗೆ ತುಂಬ ಹೆದರಿಕೆಯಾಯಿತು. ಹಿಂದಿರುಗಿ ಮನೆಯೊಳಗೆ ನುಗ್ಗಿ, ಬಾಗಿಲು ಮುಚ್ಚಿ ಅಗಳಿ ಹಾಕಿಕೊಂಡರು. ನಾನು ಲಕ್ಷ್ಮಿಯ ಹತ್ತಿರ ಹೋಗಿ 'ಶಾಭಾಸ್' ಎಂದು ಅದರ ಬೆನ್ನು ತಟ್ಟಿದೆ.



ಸ್ವಲ್ಪ ಹೊತ್ತಿನ ಮೇಲೆ ಬಾಳೆಹಣ್ಣಿನ ಉಳಿದರ್ಧ ಚಿಪ್ಪನ್ನು ಕೈಯಲ್ಲಿ ಹಿಡಿದುಕೊಂಡು ಅಜ್ಜ ಹೊರಬಂದರು. ತೊಗೊಂಡು ಲಕ್ಷ್ಮಿಗೆ ಕೊಡು ಅಂದರು. ಕೊಟ್ಟೆ. ಅಜ್ಜ, ಲಕ್ಷ್ಮಿ ಇಬ್ಬರಿಗೂ ಸಂತೋಷವಾಯಿತು.

ಲಕ್ಷ್ಮಿ ನಮ್ಮ ಜೊತೆ ಇದ್ದದ್ದು ಹದಿನೈದು ದಿನ ಮಾತ್ರ. ಅದು ಹೊರಟು ಹೋದಾಗ ನನಗೆ ಹೇಳತೀರದಷ್ಟು ವ್ಯಥೆಯಾಯಿತು.



# ಮೊಸಳೆಯ ಬೇಟೆ

ಒಂದು ಸಾರಿ ನಮ್ಮ ತೋಟದ ಕೊಳವೊಂದರಲ್ಲಿ ಒಂದು ದೊಡ್ಡ ಮೊಸಳೆ ಸೇರಿಕೊಂಡಿತ್ತು. ಅದು ಮಳೆಗಾಲದಲ್ಲಿ ಬಂದು ಬೇಸಿಗೆಯವರೆಗೂ ಅಲ್ಲಿ ತಂಗಿತ್ತು.

ಮೊಸಳೆಗಳು ಆಹಾರ ಹುಡುಕಿಕೊಂಡು ಅಲೆದಾಡುತ್ತವೆ. ಸುಲಭವಾಗಿ ಆಹಾರ ಸಿಗುವ ಕಡೆ ಇದ್ದು ಬಿಡುತ್ತವೆ. ನಮ್ಮ ಕೊಳಗಳಲ್ಲಿ ಬೇಕಾದಷ್ಟು ಮೀನಿರುತ್ತಿತ್ತು. ಈ ಮೊಸಳೆ ಮೀನಿನ ಆಸೆಗಾಗಿ ಬಂದಿತ್ತು.

ಮೊಸಳೆ ಕೊಳದ ದಂಡೆಯ ಮೇಲೆ ಊರಗಲ ಬಾಯಿ ತೆರೆದುಕೊಂಡು, ಬಿಸಿಲು ಕಾಯಿಸುವುದನ್ನು ಆಗಾಗ್ಗೆ ನೋಡುತ್ತಿದ್ದೆ. ಅದು ನಮ್ಮ ಕೊಳದಲ್ಲಿ ಬಿಡಾರ ಮಾಡಿದ್ದಕ್ಕೆ ನಾನು ಬೇಡ ಅನ್ನಲಿಲ್ಲ. ಆದರೆ ನಮ್ಮ ಮೀನು ತಿಂದು ಹಾಕುವುದು ಮಾತ್ರ ನನಗೆ ಇಷ್ಟ ವಾಗಲಿಲ್ಲ. ಆದ್ದರಿಂದ ಮೊಸಳೆ ಅಲ್ಲಿಂದ ಹೊರಟುಹೋಗಲೆಂಬುದು ನನ್ನ ಅಪೇಕ್ಷೆಯಾಗಿತ್ತು. ಅದು ತಾನಾಗಿಯೇ ಹೋಗುತ್ತಿರಲಿಲ್ಲ ವಾದ್ದರಿಂದ ನಾನೇ ಅದನ್ನು ಓಡಿಸುವ ಪ್ರಯತ್ನ ಮಾಡಿದೆ. ಕಲ್ಲು ಇಟ್ಟಿಗೆಗಳನ್ನು ಶೇಖರಿಸಿ, ಮೆಲ್ಲನೆ ತುದಿಗಾಲಲ್ಲಿ ನಡೆಯುತ್ತ ಕೊಳದ ಬಳಿಗೆ ಬಂದೆ. ಮೊಸಳೆ ದಂಡೆಯ ಮೇಲಿತ್ತು. ಒಂದು ಮರದ ಹಿಂದೆ ನಿಂತು ನನ್ನ ಬಲವನ್ನೆಲ್ಲಾ ಬಿಟ್ಟು ಒಂದು ಇಟ್ಟಿಗೆ ಎಸೆದೆ. ಇಟ್ಟಿಗೆ ಅದಕ್ಕೆ ತಾಗುವ ಮೊದಲೇ ಮೊಸಳೆ ನೀರಿನಲ್ಲಿ ಜಾರಿ ಮಾಯವಾಯಿತು. ಹೊರಬರುವುದೆಂದು ಕಾದೆ. ಆದರೆ ಅದು ಮತ್ತೆ ಮುಖ ತೋರಿಸಲಿಲ್ಲ.

ಮನೆಗೆ ಹೋಗಿ ಕೆಲವು ಗಂಟೆ ಬಿಟ್ಟು ಮತ್ತೆ ಬಂದೆ. ಮೊಸಳೆ ಪುನಃ ಮೇಲೆ ಬಂದಿತ್ತು. ಮತ್ತೆ ಅದಕ್ಕೆ ಕಲ್ಲೆಸೆಯಲು ಪ್ರಯತ್ನಿಸಿದೆ. ಮತ್ತೆ ಏಟು ತಪ್ಪಿಸಿಕೊಂಡು ಹೋಯಿತು. ಹೀಗೆ ಮೊಸಳೆಗೆ ಹೊಡೆಯಬೇಕೆಂದು ಎಷ್ಟೋ ದಿನ ಪ್ರಯತ್ನಪಟ್ಟೆ. ಆದರೆ ಪ್ರತಿ ಸಲವೂ ಗುರಿ ತಪ್ಪುತ್ತಿತ್ತು. ಅದಕ್ಕೆ ತಕ್ಕ ಶಾಸ್ತಿ ಮಾಡಲು ಬೇರೆ ಏನಾದರೂ ಉಪಾಯ ಹುಡುಕಬೇಕು ಅನ್ನಿಸಿತು.

ಹಿಂದೊಂದು ಸಲ ಹಗ್ಗದ ಕುಣಿಕೆ ಹಾಕಿ ಒಂದು ಪೋಲಿ ನಾಯಿ ಹಿಡಿಯುವುದನ್ನು ನೋಡಿದ್ದೆ. ಮೊಸಳೆಯನ್ನು ಸಹ ಹಾಗೆಯೇ ಕುಣಿಕೆ ಹಾಕಿ ಹಿಡಿಯಬಹುದೆಂದು ತೋರಿತು. ಅದು ಹಗಲ ಹೊತ್ತು ಬಂದು ಕೊಳದಲ್ಲಿರುತ್ತಿತ್ತು. ರಾತ್ರಿ ಕೊಳದಿಂದ ಕೊಳಕ್ಕೆ ಮೀನು ಹಿಡಿಯಲು ಹೋಗುತ್ತಿತ್ತು. ಹಾಗೆ ಹೋಗುವಾಗ ದಾರಿಯುದ್ದಕ್ಕೂ ಹೆಜ್ಜೆಯ ಗುರುತು ಬಿಟ್ಟಿರುತ್ತಿತ್ತು. ಅದರ ಜಾಡು ಹಿಡಿದು ಹೋಗಿ ನೋಡಿದಾಗ ಒಂದು ಕೊಳದ ಸುತ್ತ ಇದ್ದ ಬೇಲಿಯಲ್ಲಿ ಒಂದು ಕಡೆ ಅದು ಕಂಡಿ ಮಾಡಿದ್ದುದು ಕಾಣಿಸಿತು. ಕುಣಿಕೆಯ ಬಲೆ ಹಾಕಲು ಅದೇ ಸರಿಯಾದ ಸ್ಥಳವೆಂದು ತೋರಿತು. ಮೊಸಳೆ ಆ ದಾರಿಯಲ್ಲಿ ಬರುವುದಂತೂ ಖಂಡಿತ. ಆಗ ಕುಣಿಕೆ ಯಲ್ಲಿ ಸಿಕ್ಕಿ ಬೀಳದಿರುವುದು ಸಾಧ್ಯವೇ ಇರಲಿಲ್ಲ. ಒಂದು ಬಲವಾದ ಉದ್ದನೆಯ ಹಗ್ಗ ಹುಡುಕತೊಡಗಿದೆ. ಕೊಟ್ಟಿಗೆಯಲ್ಲಿ ಎತ್ತುಹಸು ಗಳನ್ನು ಕಟ್ಟಿ ಹಾಕಲು ಅಂತಹ ಉದ್ದವಾದ ಹಗ್ಗ ಬಳಸುತ್ತಿದ್ದರು. ಆದರೆ ಅಲ್ಲಿಂದ ಸುಲಭವಾಗಿ ತೆಗೆದುಕೊಳ್ಳುವ ಹಾಗಿರಲಿಲ್ಲ. ಏಕೆಂದರೆ ಅಜ್ಜ ಬಿಡುತ್ತಿರಲಿಲ್ಲ. ಆದ್ದರಿಂದ ಅಜ್ಜ ಮನೆಯಲ್ಲಿಲ್ಲದ ಹೊತ್ತಿಗಾಗಿ ಕಾಯಬೇಕಾಗಿತ್ತು.



ಬಲುಬೇಗ ಅಂತಹ ಒಂದು ಅವಕಾಶ ಸಿಕ್ಕಿತ್ತು. ಅಜ್ಜ ಯಾವುದೋ ಕೆಲಸದ ಮೇಲೆ ಊರಾಚೆ ಹೋಗಿದ್ದರು.

ಆ ಸಂಜೆ ಕೊಟ್ಟಿಗೆಗೆ ಹೋಗಿ ಒಂದು ಹಸುವಿನ ಕುತ್ತಿಗೆಯಿಂದ ಉದ್ದವಾದ ಹಗ್ಗ ಬಿಚ್ಚಿದೆ. ಬೇಲಿಯಲ್ಲಿ ಮೊಸಳೆ ಕಂಡಿ ಮಾಡಿದ್ದಲ್ಲಿಗೆ ಅದನ್ನು ತೆಗೆದುಕೊಂಡು ಹೋದೆ. ಹಗ್ಗದ ಕೊನೆಯಲ್ಲಿ ಒಂದು ಕುಣಿಕೆ ಮಾಡಿ, ಕುಣಿಕೆಯುನ್ನು ಕಂಡಿಗೆ ಜೋಡಿಸಿದೆ. ಇನ್ನೊಂದು ಕೊನೆಯನ್ನು ಒಂದು ದೊಡ್ಡ ಮರಕ್ಕೆ ಕಟ್ಟಿದೆ. ಕುಣಿಕೆಯ ಬಲೆ ಸಿದ್ಧವಾಯಿತು. ಮೊಸಳೆ ಕುಣಿಕೆಯಲ್ಲಿ ಸಿಕ್ಕಿ ಬೀಳುವುದೆಂದು ಆಶಿಸುತ್ತಾ ಮನೆಗೆ ಹೋದೆ.

ಮಾರನೆಯ ಬೆಳಿಗ್ಗೆ ಮುಂಚೆಯೇ ಎದ್ದು ಬೇಲಿಯ ಬಳಿಗೆ ಓಡಿದೆ. ನೋಡಿದರೆ ಅಲ್ಲಿತ್ತು, ಭಾರೀ ಮೊಸಳೆ. ಅದರ ಕೊರಳಿಗೆ ಕುಣಿಕೆ ಬಲವಾಗಿ ಗಂಟುಬಿದ್ದಿತ್ತು. ತಪ್ಪಿಸಿಕೊಂಡು ಹೋಗಲು ಅದು ಬಹಳ ಹೋರಾಡಿತ್ತು. ಅದರ ಹೋರಾಟಕ್ಕೆ ಮರದಸುತ್ತಣ ನೆಲವೆಲ್ಲ ಕಿತ್ತುಬಂದಿತ್ತು.

ಮೊಸಳೆ ನನ್ನನ್ನು ಕಂಡ ತಕ್ಷಣ ಬಾಯಿತೆರೆದು ಕಿರ್ರನೆ ಕಿರುಚುತ್ತ ನನ್ನ ಕಡೆಗೆ ನುಗ್ಗಿತು. ಆದರೆ ಹಗ್ಗ ಬಲವಾಗಿದ್ದ ಕಾರಣ, ಅದನ್ನು ತಡೆದು ನಿಲ್ಲಿಸಿತು.

ಮನೆಗೆ ಓಡಿ. ಚಿಕ್ಕಪ್ಪನನ್ನು ಎಬ್ಬಿಸಿ, ನನ್ನ ಭಾರಿ ಬೇಟೆಯ ವಿಷಯ ತಿಳಿಸಿದೆ. ಮೊದಲು ಅವನು ನಂಬಲಿಲ್ಲ. ಆಮೇಲೆ ಎದ್ದು ನನ್ನಜೊತೆ ಬಂದು ನೋಡಿದಾಗ ನನ್ನ ಮಾತು ನಿಜವೆಂದು ಗೊತ್ತಾಯಿತು. ಮೊಸಳೆಯನ್ನು ಅಲ್ಲಿಂದ ನಮ್ಮ ಮನೆಯಹತ್ತಿರಕ್ಕೆ ಸಾಗಿಸಬೇಕು ಅನ್ನಿಸಿತು. ಚಿಕ್ಕಪ್ಪ ಸಹಾಯಮಾಡಿದ. ಇನ್ನೊಂದು ಹಗ್ಗ ತಂದು, ಅದರ ಒಂದು ಕೊನೆಯಲ್ಲಿ ಕುಣಿಕೆ ಮಾಡಿ. ಅದನ್ನು ದೊಡ್ಡ ಗಳುವಿನ ಸಹಾಯದಿಂದ ಮೊಸಳೆಯ ಮೈಗೆ ಬಿಗಿದ. ಆಮೇಲೆ ನಾವಿಬ್ಬರೂ ಆ ಭಾರೀ ಪ್ರಾಣಿಯನ್ನು ಎಳೆದುಕೊಂಡು ಹೊರಟೆವು. ನಾನು ಮುಂದಿನಿಂದ ಎಳೆಯುತ್ತ ನಡೆದೆ; ಚಿಕ್ಕಪ್ಪ ಹಿಂದಿನಿಂದ ಹಗ್ಗಹಿಡಿದುಕೊಂಡು ಬಂದ. ಮೊಸಳೆಯನ್ನು ಮನೆಯ ಸಮೀಪಕ್ಕೆ ತಂದು, ಎರಡು ಮರಗಳಿಗೆ ಬಿಗಿದು ಕಟ್ಟಿದೆವು.

ಆ ಹೊತ್ತಿಗೆ ನನ್ನ ಭಾರೀ ಬೇಟೆಯ ಸುದ್ದಿ ಜನಕ್ಕೆ ತಿಳಿದಿತ್ತು. ಅದನ್ನು ನೋಡಲು ಅನೇಕರು ಬಂದರು. ಎಲ್ಲರಿಗಿಂತ ಮೊದಲು ಬಂದವಳೆಂದರೆ ಅಜ್ಜಿ. ಆಮೇಲೆ ಆಳುಗಳೂ ನೆರೆಯವರೂ ಬಂದರು.

ಸುದ್ದಿ ಹರಡಿತು. ಹೆಚ್ಚು ಹೆಚ್ಚು ಜನ ಬರತೊಡಗಿದರು.

ಅವತ್ತು ಶಾಲೆಗೆ ಹೋಗುವ ಮನಸ್ಸಾಗಲಿಲ್ಲ. ರಜೆ ಕೇಳಿ, ಮೇಷ್ಟರಿಗೆ ಕಾಗದ ಬರೆದು ಕಳಿಸಿದೆ. ಅದರಲ್ಲಿ ನಾನು ಹಿಡಿದಿದ್ದ ಭಾರೀ ಮೊಸಳೆಯ ವಿಷಯವನ್ನೂ ತಿಳಿಸಿದೆ.

ನಮ್ಮ ಆಳುಗಳಲ್ಲಿ ಒಬ್ಬ ಶಾಲೆಗೆ ಹೋಗಿ ಆ ಕಾಗದವನ್ನು ಕೊಟ್ಟು ಬಂದ. ಅವನ ಹಿಂದೆಯೇ ಮೇಷ್ಟರೂ ಇಡೀ ತರಗತಿಯ ಮೂವತ್ತಕ್ಕೂ ಹೆಚ್ಚು ಮಂದಿ ಹುಡುಗರೂ ಮೊಸಳೆ ನೋಡಲು ಬಂದರು.

ಕನಿಷ್ಠ ನನ್ನ ಸಹಪಾಠಿಗಳ ನಡುವೆಯಾದರೂ ನಾನೊಬ್ಬ ಮಹಾ ಶೂರನೆಂಬ ಭಾವನೆ ನನ್ನಲ್ಲಿ ಬಂದುಬಿಟ್ಟಿತು. ಅವರಿಗೆ ಮೊಸಳೆಯ ವಿಷಯವನ್ನು ಹೇಳಿ, ಅದನ್ನು ಹೇಗೆ ಹಿಡಿದೆನೆಂದು ವಿವರಿಸಿದೆ. ಮೇಷ್ಟರೂ ಮಾತನಾಡಿ ಮೊಸಳೆಯ ಬಗ್ಗೆ ನಮಗೆ ಗೊತ್ತಿದ್ದಕ್ಕಿಂತ ಹೆಚ್ಚು ವಿಷಯ ತಿಳಿಸಿದರು.

ಗುಂಪು ದೊಡ್ಡದಾಯಿತು. ಅದರಲ್ಲಿ ಕೆಲವರಿಗೆ ಮೊಸಳೆಗೆ ಹಿಂಸೆಮಾಡುವ ಚಪಲ. ಅದರ ಕಡೆಗೆ ಕಲ್ಲು ದೊಣ್ಣೆ ಎಸೆದರು.

ಅದು ನನಗೆ ಸರಿಬೀಳಲಿಲ್ಲ. ಆ ಮೊಸಳೆ ನನ್ನದು, ಅದಕ್ಕೆ ಕೆಡಕುಮಾಡಲು ಯಾರಿಗೂ ಹಕ್ಕಿಲ್ಲ ಎಂದು ಹೇಳಿದೆ. ಆದರೆ ಅವರು ನನ್ನ ಮಾತಿಗೆ ಕಿವಿಗೊಡಲಿಲ್ಲ.

ಗುಂಪು ಇದ್ದಿದ್ದೂ ಬೆಳೆಯಿತು. ಇನ್ನೂ ಹೆಚ್ಚು ಜನ ಮೊಸಳೆಗೆ ಕಲ್ಲುಹೊಡೆಯತೊಡಗಿದರು. ಅವರಲ್ಲಿ ಕೆಲವರು ಅದನ್ನು ಸಾಯಿಸುವುದಾಗಿ ಮಾತಾಡಿಕೊಳ್ಳುತ್ತಿದ್ದದ್ದು ಕೇಳಿಸಿತು. ಮೊಸಳೆಗೆ ನೋಯಿಸಬೇಡಿ ಎಂದು ಗೋಗರೆದೆ. ಕೊನೆಗೆ ಕಟ್ಟುಬಿಚ್ಚಿ ಅದನ್ನು ಬಿಡುವುದಾಗಿ ಹೇಳಿದೆ.

ಅನೇಕರಿಗೆ ನನ್ನ ಮೇಲೆ ಕೋಪಬಂತು. ಆ ದುಷ್ಟ ಮೊಸಳೆಯನ್ನು ಬಿಟ್ಟುಬಿಡುವುದು ಅಪಾಯಕರ ಎಂದು ಅವರಂದರು. ಮೊಸಳೆಯಾಗಲೇ ಸಾಕಷ್ಟು ನಷ್ಟಮಾಡಿದೆ, ಆದ್ದರಿಂದ ಅದನ್ನು ಕೊಲ್ಲುವುದೇ ಲೇಸು ಎಂದು ಕೆಲವರು ಹೇಳಿದರು. ಒಬ್ಬ ಮುಂದೆ ಬಂದು "ಈ ಮೊಸಳೆ ನನ್ನ ನಾಯಿಯನ್ನು ತಿಂದು ಹಾಕಿತ್ತು" ಎಂದು ಹೇಳಿದ. ಇನ್ನೊಬ್ಬ "ನನ್ನ ಹಸುವಿನ ಮೇಲೆ ಹಾರಿಬಿದ್ದಿತ್ತು" ಅಂದ. "ಅವತ್ತು ರಾತ್ರಿ ನನ್ನನ್ನು ಕೊಲ್ಲಲು ಬೆನ್ನಟ್ಟಿ ಬಂದಿದ್ದದ್ದು ಇದೇ ಮೊಸಳೆ ನೋಡಿ" ಎಂದು ಒಬ್ಬ ಹೆಂಗಸು ಅರಚಿದಳು.

ಗುಂಪಿನ ಜನಕ್ಕೆ ಕೋಪ ಆತುರ. ಅವರಲ್ಲಿ ಅನೇಕರು ದೊಣ್ಣೆ, ಚಾಕು ಹಿಡಿದು ಬಂದಿದ್ದರು. ಕೆಲವರ ಕೈಯಲ್ಲಿ ಮಚ್ಚಿತ್ತು. ಅವರೆಲ್ಲರೂ ಸೇರಿ ನನ್ನ ಮೊಸಳೆಯನ್ನು ಕೊಲ್ಲಬಯಸಿದ್ದರು. ನಾನೋ ಒಂಟಿ, ಸಹಾಯವಿಲ್ಲದವ. ಚಿಕ್ಕಪ್ಪನನ್ನು ಕೂಗಿದೆ. ಆದರೆ ಅವನು ಅಲ್ಲೆಲ್ಲೂ ಕಾಣಿಸಲಿಲ್ಲ. ಪ್ರಾಯಶಃ ಅವನೂ ಗುಂಪಿನಲ್ಲಿದ್ದನೇನೋ. ಅಜ್ಜಿಯನ್ನು ಕೂಗಿದೆ. ಬಂದಳು. ಆದರೆ ಅವಳಾಗಲೇ ಗುಂಪಿನ ಜನರ ಮಾತನ್ನು ಕೇಳಿದ್ದಳು. ಅವಳೂ ಮೊಸಳೆಯನ್ನು ಕೊಲ್ಲುವುದೇ ಸರಿ ಎಂದಳು. ನನಗೆ ಒಂದಿಷ್ಟೂ ಆಸೆ ಉಳಿಯಲಿಲ್ಲ.

ಆಗ ಇದ್ದಕ್ಕಿದ್ದಂತೆಯೇ ಅಜ್ಜ ಹಿಂದಿರುಗಿ ಬಂದರು. ಯಾರಾದರೂ ನನ್ನ ಮೊಸಳೆಯ ಜೀವ ಉಳಿಸಬಹುದಾದವರಿದ್ದರೆ ಅವರೊಬ್ಬರೇ ಎಂದು ನನಗೆ ಗೊತ್ತಿತ್ತು. ಅವರ ಬಳಿ ಓಡಿ ನಡೆದದ್ದನ್ನೆಲ್ಲಾ ಹೇಳಿದೆ. ಮೊಸಳೆಯ ಜೀವ ಉಳಿಸಿಕೊಡಿ ಎಂದು ಗೋಗರೆದೆ.

ಅಜ್ಜ ನನ್ನೊಂದಿಗೆ ಮೊಸಳೆಯನ್ನು ಕಟ್ಟಿಹಾಕಿದ್ದಲ್ಲಿಗೆ ಬಂದರು. ಒಂದು ಸಲ ಆ ಭಾರೀ ಬಂದಿಯ ಕಡೆ ನೋಡಿದರು. ಆಮೇಲೆ ಗುಂಪಿನ ಕಡೆ ನೋಡಿದರು. ದೊಡ್ಡಧ್ವನಿಯಲ್ಲಿ ಮೊಸಳೆಯನ್ನು ಬಿಟ್ಟುಬಿಡುವುದಾಗಿ ಹೇಳಿದರು. ಅದಕ್ಕೆ ಯಾರೂ ಕೆಡುಕು ಮಾಡಕೂಡದೆಂದರು.

ನಾನು ಸಂತೋಷದಿಂದ ಕುಣಿದಾಡಿದೆ. ಗುಂಪಿನ ಜನಕ್ಕೆ ಅಜ್ಜನ ತೀರ್ಪು ಇಷ್ಟವಾದಂತೆ ಕಾಣಲಿಲ್ಲ. ಕೆಲವರು ಅವರೊಂದಿಗೆ ವಾದಿಸಲು ಪ್ರಯತ್ನಿಸಿದರು. ಆದರೆ ಅಜ್ಜ ವಾದಕ್ಕೆ ಅವಕಾಶಕೊಡುವವರೆ? ಗುಂಪಿನ ಜನರ ಮೇಲೆ ಅಬ್ಬರಿಸಿದರು. ಜಾಗಬಿಟು ಹೊರಡಿ ಅಂದರು. ಗುಂಪು ಕರಗಿ ಹೋಯಿತು.



ಆಮೇಲೆ ಅಜ್ಜ ನನ್ನ ಕಡೆ ತಿರುಗಿ "ಮೊಸಳೆಯನ್ನು ಈಗಲೇ ಬಿಟ್ಟುಬಿಡೋ" ಅಂದರು. ಮೊಸಳೆಯ ಜೀವ ಉಳಿಯಿತು. ಆದರೆ ನನಗೆ ಇದ್ದಕ್ಕಿದ್ದಂತೆಯೇ ಭಯವಾಯಿತು. ಮೊಸಳೆಯನ್ನು ಬಿಟ್ಟು ಬಿಡುವ ಬಗೆ ಹೇಗೆ?

ಅಷ್ಟು ಹೊತ್ತಿಗೆ ಚಿಕ್ಕಪ್ಪ ಬಂದ. ನನಗೆ ಸಹಾಯಮಾಡುವುದಾಗಿ ಹೇಳಿದ. ನಮ್ಮ ಮನೆಗೆ ಸ್ವಲ್ಪ ದೂರದಲ್ಲಿ ದೇವಸ್ಥಾನಕ್ಕೆ ಸೇರಿದ ಒಂದು ದೊಡ್ಡ ಕೊಳವಿತ್ತು. ಆ ಕೊಳದಲ್ಲಿ ಬಹಳ ಮೊಸಳೆಗಳಿದ್ದುವು. ನಮ್ಮ ಮೊಸಳೆಯನ್ನು ಅಲ್ಲಿಗೆ ಸಾಗಿಸಿಕೊಂಡು ಹೋಗಿ ಬಿಟ್ಟುಬಿಡಬಹುದು ಅಂದ.

ಕೊಳದ ಬಳಿಗೆ ಒಂದು ಉದ್ದವಾದ ಏಣಿ ತರಿಸುವ ವ್ಯವಸ್ಥೆ ಮಾಡಿದ. ಆಮೇಲೆ ಮೊಸಳೆಯನ್ನು ಎಳೆದುಕೊಂಡು ಹೊರಟೆವು. ಅಜ್ಜನೂ ಜೊತೆಗೆ ಬಂದು ಅದಕ್ಕೆ ಯಾರೂ ಕೇಡುಮಾಡದಂತೆ ನೋಡಿಕೊಂಡರು.

ಮೊಸಳೆಯನ್ನು ನೀರಿನ ಸಮೀಪಕ್ಕೆ ತೆಗೆದುಕೊಂಡು ಹೋಗಿ ಅದರ ಮೇಲೆ ಏಣಿಯನ್ನು ಹೇರಿದೆವು. ಎಂಟು ಜನ ಮೊಸಳೆ ಅಲುಗಾಡದಂತೆ ಅದರ ಮೈಮೇಲೆ ಏಣಿಯನ್ನು ಎರಡೂ ಕಡೆ ಒತ್ತಿ ಹಿಡಿದುಕೊಂಡರು. ಚಿಕ್ಕಪ್ಪ ಮುಂದೆ ಹೋಗಿ ಮೊಸಳೆಯ ಮೈಗೆ ಕಟ್ಟಿದ್ದ ಹಗ್ಗವನ್ನು ಚಾಕುವಿನಿಂದ ಕತ್ತರಿಸಿದ. ಅವನು ಹಿಂದೆ ಸರಿದ ಮೇಲೆ ಏಣಿಯನ್ನು ಎತ್ತಿದರು. ಮೊಸಳೆ ಚಂಗನೆ ನೀರಿಗೆ ನೆಗೆದು ಮಾಯವಾಯಿತು. ನಾವು ಹಾಯೆಂದು ನಿಟ್ಟುಸಿರು ಬಿಡುತ್ತ ಮನೆಗೆ ವಾಪಸು ಬಂದೆವು.

ಕೆಲವು ದಿನಗಳ ಮೇಲೆ ಆ ನನ್ನ ಮೊಸಳೆ ಮತ್ತೆ ನನ್ನ ಕಣ್ಣಿಗೆ ಬಿತ್ತು. ನಾನು ಹಿಡಿಯುವ ಮೊದಲು ಯಾವ ಕೊಳದಲ್ಲಿ ವಾಸವಾಗಿತ್ತೋ, ಅದೇ ಕೊಳದ ದಂಡೆಯ ಮೇಲೆಯೇ ಬಿಸಿಲು ಕಾಯಿಸುತ್ತ ಮಲಗಿತ್ತು.





# ಶಾಲೆಯ ಜೀವನ

ನಮ್ಮ ಶಾಲೆಯ ಹೆಡ್‌ಮೇಷ್ಟರು ದಡೂತಿ ಆಸಾಮಿ; ಜೊತೆಗೆ ಕುಳ್ಳು ಬೇರೆ. ಅವರು ಎಷ್ಟು ದಪ್ಪಗೆ, ಗಿಡ್ಡಗೆ ಇದ್ದರೆಂದರೆ, ಓಡಿದಾಗ ಚೆಂಡು ಉರುಳುತ್ತಿರುವಂತೆ ಭಾಸವಾಗುತ್ತಿತ್ತು. ನಾವು ವಿದ್ಯಾರ್ಥಿಗಳು ಅವರ ಬೆನ್ನಹಿಂದೆ ಗೇಲಿಮಾಡಿಕೊಂಡು ನಗುತ್ತಿದ್ದೆವು. ಆದರೆ ಎದುರಿಗೆ ಮಾತ್ರ ಬೆಕ್ಕಿನ ಮುಂದೆ ನಿಂತ ಇಲಿಮರಿಗಳಂತೆ ಇರುತ್ತಿದ್ದೆವು. ಅವರು ಯಾವಾಗಲೂ ಗಂಭೀರ; ಶಾಲೆಯಲ್ಲಿ ಎಂದೂ ನಗುತ್ತಿರಲಿಲ್ಲ. ವಿದ್ಯಾರ್ಥಿಗಳಲ್ಲಿ ಕಟ್ಟುನಿಟ್ಟಾಗಿ ಶಿಸ್ತನ್ನು ಅಪೇಕ್ಷಿಸುತ್ತಿದ್ದರು. ಅದಕ್ಕಾಗಿ ಸಾಧ್ಯವಿದ್ದಷ್ಟೂ ತಮ್ಮ ಬೆತ್ತದ ಉಪಯೋಗ ಪಡೆಯುತ್ತಿದ್ದರು.

ಹೆಡ್‌ಮೇಷ್ಟರೂ ನಮ್ಮಜ್ಜನೂ ಸ್ನೇಹಿತರು. ಅಜ್ಜನನ್ನು ಕಂಡು ಶಾಲೆಯಲ್ಲಿ ನನ್ನ ಪ್ರಗತಿಯ ಬಗ್ಗೆ ವರದಿ ಒಪ್ಪಿಸಿಹೋಗಲು ಅವರು ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದರು. ಅವರು ಎಂದೂ ನನ್ನ ವಿಷಯದಲ್ಲಿ ವಿಶೇಷ ಆಸಕ್ತಿ ವಹಿಸಿದವರಲ್ಲ. ಆದರೂ ಅವರ ವರದಿಯ ಪ್ರಕಾರ ಶಾಲೆಯ ಒಳ್ಳೆಯ ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬ, ನನ್ನ ಮುಂದೆ ಉತ್ತಮ ಭವಿಷ್ಯ ಕಾದಿತ್ತು! ಅಜ್ಜನಿಗೆ ಇಂಥ ವರದಿ ಕೇಳಿ ಸಂತೋಷವಾಗುತ್ತಿತ್ತು. ಹೆಡ್‌ಮೇಷ್ಟರರ ಬಾಯಿಯಿಂದ ಅದನ್ನು ಕೇಳಿದಷ್ಟೂ ಇನ್ನೂ ಕೇಳಬಯಸುತ್ತಿದ್ದರು. ಹೆಡ್‌ಮೇಷ್ಟರು ಸಹಾ ಸಂತೋಷದಿಂದಲೇ ಅಜ್ಜನ ಅಪೇಕ್ಷೆಯನ್ನು ಪೂರೈಸುತ್ತಿದ್ದರು.

ಆದರೆ ಒಂದು ಸಾರಿ ಮಾತ್ರ ನಾನು ಓದುಬರಹಕ್ಕೆ ಅಲಕ್ಷ್ಯ ಮಾಡುತ್ತಿದ್ದೇನೆಂದೂ ನನ್ನ ಬಗ್ಗೆ ಇನ್ನೊಂದಿಷ್ಟು ಗಮನ ಕೊಡಬೇಕೆಂದೂ ಹೇಳಿದರು.

ಹೆಡ್‌ಮೇಷ್ಟರು ಹೋದಕೂಡಲೇ ಅಜ್ಜ ನನ್ನ ಬಗ್ಗೆ "ಇನ್ನೊಂದಿಷ್ಟು ಗಮನ"ವನ್ನು ಕೊಟ್ಟೇ ಬಿಟ್ಟರು! ಬೆತ್ತ ಹಿಡಿದು ಇದ್ದಕ್ಕಿದ್ದಂತೆ ನನ್ನ ಕೋಣೆಯಲ್ಲಿ ಕಾಣಿಸಿಕೊಂಡರು. ಆಗ ನಾನೊಂದು ಬಣ್ಣದ ಚಿತ್ರ ಬರೆಯುತ್ತ ಕೂತಿದ್ದೆ. ಅಜ್ಜ ಹುಲಿಯಂತೆ ನನ್ನ ಮೈಮೇಲೆ ಹಾರಿಬಿದ್ದು, ಮುಂಗೈಯನ್ನು ಬಿಗಿಯಾಗಿ ಹಿಡಿದು, ಹೊಡೆಯಲು ಷುರುಮಾಡಿದರು. ನಾನು ಜೋರಾಗಿ ಅಳುತ್ತ, ಬಂದು ನನ್ನನ್ನು ಬದುಕಿಸೆಂದು ಅಜ್ಜಿಯನ್ನು ಕೂಗಿದೆ. ಅಜ್ಜಿ ದಡದಡನೆ ಓಡಿಬಂದು, ನನ್ನ ಮತ್ತು ಅಜ್ಜನ ನಡುವೆ ನಿಂತಳು. "ಸಾಕು ನಿಲ್ಲಿಸೀಂದ್ರೆ. ಇದೇನು ನೀವು ಮಾಡ್ತಿರೋದು? ಮಗೂನ ಸಾಯಿಸ್ತಿದ್ದೀರಲ್ಲಾ" ಎಂದು ಅರಚಿದಳು.

ಅಜ್ಜ ನನ್ನ ಕೈಬಿಟ್ಟು, ಅಜ್ಜಿಯ ಕಡೆ ತಿರುಗಿ, "ನೀನೇ ಅವನನ್ನು ಕೆಡಿಸ್ತಿರೋದು. ಓದೋದು ಬಿಟ್ಟು, ಬರೀ ಚಿತ್ರ ಬರೀತಿರ್‍ತಾನೆ" ಎಂದು ಕೂಗಾಡಿದರು.

ಆಮೇಲೆ ಕೋಣೆಯ ಸುತ್ತ ಕಣ್ಣಾಡಿಸಿದರು. ಗೋಡೆಯ ತುಂಬ ನಾನು ಬರೆದಿದ್ದ ಚಿತ್ರಗಳೇ. ಅವರಿಗೆ ರೋಷ



ಉಕ್ಕಿಬಂತು. ಕೈಗೆ ಸಿಕ್ಕಿದ ಚಿತ್ರಗಳನ್ನು ಕಿತ್ತು ಹರಿದುಹಾಕಿದರು. ಇನ್ನು ಮೇಲೆ ಚಿತ್ರ ಬರೆದು ಕಾಲ ಕಳೆಯಕೂಡದೆಂದರು. ಎಚ್ಚರಿಕೆ ಹೇಳಿ ಹೋದರು.

ನನ್ನ ಒಳ್ಳೆಯ ಚಿತ್ರಗಳೆಲ್ಲಾ ಹಾಳಾದದ್ದನ್ನು ನೋಡಿ ನನಗೆ ವ್ಯಥೆಯಾಯಿತು. ಮತ್ತೆ ಮನೆಯಲ್ಲಿ ಚಿತ್ರ ಬರೆಯುವುದಕ್ಕೇ ಭಯವಾಯಿತು.

ಒಂದು ದಿನ ಗಣಿತದ ಪಾಠಮಾಡಲು ಹೆಡ್‌ಮೇಷ್ಟರು ನಮ್ಮ ತರಗತಿಗೆ ಬಂದರು. ನಮ್ಮ ಮಾಮೂಲಿನ ಮೇಷ್ಟರು ರಜದ ಮೇಲಿದ್ದರು. ಯಾವುದೇ ಪಾಠ ತಪ್ಪುವುದೂ ಹೆಡ್‌ಮೇಷ್ಟರಿಗೆ ಇಷ್ಟವಿರಲಿಲ್ಲ.

ನಮಗೆ ಹೆಡ್‌ಮೇಷ್ಟರು ಯಾವ ತರಗತಿ ತೆಗೆದುಕೊಳ್ಳುವುದೂ ಬೇಕಾಗಿರಲಿಲ್ಲ. ಆದರೆ ನಾವೇನು ಮಾಡುವಹಾಗಿದ್ದೆವು?



ಅವರು ತರಗತಿಯೊಳಗೆ ಕಾಲಿಟ್ಟಂತೆಯೇ ನಾವೆಲ್ಲರೂ ಮೌನವಾಗಿ ಎದ್ದುನಿಂತೆವು. ಎಲ್ಲವೂ ಸರಿಯಾಗಿದೆಯೇ ಎಂದು ಒಂದು ಸಾರಿ ಸುತ್ತ ಕಣ್ಣಾಡಿಸಿದರು. ಆಮೇಲೆ ಎಡಗೈ ಸನ್ನೆಯಿಂದ ಕುಳಿತುಕೊಳ್ಳುವಂತೆ ಅಪ್ಪಣೆಮಾಡಿದರು. ಕುಳಿತುಕೊಂಡೆವು.

ತಮ್ಮಲ್ಲಿದ್ದ ಒಂದು ಚೀಟಿ ನೋಡಿಕೊಂಡು ಬೋರ್ಡಿನ ಮೇಲೆ ಐದು ಲೆಕ್ಕ ಬರೆದರು. ಆಮೇಲೆ ನಮ್ಮ ಕಡೆ ತಿರುಗಿ "ಇಲ್ಲಿ ಐದು ಲೆಕ್ಕ ಇದೆ. ಪೀರಿಯಡ್ ಮುಗಿಯೋದರೊಳಗೆ ನೀವೆಲ್ಲರೂ ಅದನ್ನು ಮಾಡಿ ಮುಗಿಸಬೇಕು, ಗೊತ್ತಾಯ್ತೆ?" ಅಂದರು.

ತಾವು ಹೇಳಿದ್ದು ನಮಗೆಲ್ಲರಿಗೂ ಅರ್ಥವಾಯಿತೆಂದು ಖಚಿತಮಾಡಿಕೊಳ್ಳಲು ಮತ್ತೊಮ್ಮೆ ಸುತ್ತಲೂ ನೋಡಿದರು.

ಆಮೇಲೆ ಕುರ್ಚಿಯ ಮೇಲೆ ಕೂತರು. ಪೇಟ ತೆಗೆದು ಮೇಜಿನ ಮೇಲಿಟ್ಟರು. ಪಾಪ! ಸುಸ್ತಾಗಿದ್ದಂತೆ ಕಾಣುತ್ತಿದ್ದರು. ಎರಡು ಕಾಲುಗಳನ್ನೂ ಎತ್ತಿ, ಮೇಜಿನ ಮೇಲೆ ಚಾಚಿ, ಸ್ವಲ್ಪ ವಿಶ್ರಾಂತಿಪಡೆಯತೊಡಗಿದರು. ಕೆಲಪೇ ಕ್ಷಣಗಳಲ್ಲಿ ಅವರಿಗೆ ಗಾಢ ನಿದ್ದೆ ಬಂದುಬಿಟ್ಟಿತು.

ಲೆಕ್ಕಗಳು ಸುಲಭವಾಗಿದ್ದವು. ಸಾಮಾನ್ಯವಾಗಿ ಎಲ್ಲ ಹುಡುಗರೂ ಕೆಲವೇ ನಿಮಿಷಗಳಲ್ಲಿ ಅವನ್ನು ಮಾಡಿ ಮುಗಿಸಿದರು.

ಲೆಕ್ಕಮಾಡಿಮುಗಿಸಿ ನಾನು ಹೆಡ್‌ಮೇಷ್ಟರ ಕಡೆ ನೋಡಿದೆ. ಅವರು ಎಷ್ಟು ತಮಾಷೆಯಾಗಿ ಕಾಣಿಸುತ್ತಿದ್ದರೆಂದರೆ ಅವರದ್ದೊಂದು ಚಿತ್ರ ಬರೆಯಬೇಕು ಅನ್ನಿಸಿತು. ಪ್ರಯತ್ನಿಸಿದೆ, ಚಿತ್ರ ಚೆನ್ನಾಗಿಯೇ ಬಂತು. ಅವರ ಗುಂಡು ಮುಖ, ಬೋಳುತಲೆ, ದಪ್ಪಹೊಟ್ಟೆ, ಬಹುಮಟ್ಟಿಗೆ ಬೆತ್ತಲಾಗಿದ್ದ ಕಾಲುಗಳು, ಮಲಗಿಕೊಂಡಿದ್ದ ಆ ವಿಚಿತ್ರ ಭಂಗಿ – ಎಲ್ಲವೂ ಚಿತ್ರದಲ್ಲಿ ಇಳಿದುಬಂದಿತ್ತು, ಹೋಲಿಕೆ ಸಹ ಎಷ್ಟು ಚೆನ್ನಾಗಿತ್ತೆಂದರೆ ಯಾರಾದರೂ ಅದು ಹೆಡ್‌ಮೇಷ್ಟರೇ ಎಂದು ಹೇಳುವಂತಿತ್ತು. ನನಗೆ ಸಂಭ್ರಮವೋ ಸಂಭ್ರಮ. ಗೆಳೆಯರಿಗೆ ತೋರಿಸಲು ತರಗತಿ ಯಾವಾಗ ಮುಗಿಯುವುದೋ ಎಂದು ಕಾದಿದ್ದೆ.

ಶಾಲೆಯ ಗಂಟೆ ಬಾರಿಸಿತು. ಹೆಡ್‌ಮೇಷ್ಟರಿಗೆ ಎಚ್ಚರವಾಯಿತು. ಎದ್ದು ನಮ್ಮ ಲೆಕ್ಕಗಳನ್ನು ನೋಡಿ ಹೊರಟರು.

ಗೆಳೆಯರ ಮುಂದೆ ಚಿತ್ರ ಹಿಡಿದು ತೋರಿಸಿದೆ. ಅವರೆಲ್ಲರೂ ಗೊಳ್ಳನೆ ನಕ್ಕರು. ಮುಂದಿನ ಪಾಠದ ಮೇಷ್ಟರು ಬಂದಾಗ ತರಗತಿಯಲ್ಲೆಲ್ಲಾ ಕೋಲಾಹಲ, ನಮ್ಮನ್ನು ಹತೋಟಿಗೆ ತರಲು ಅವರು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಯಿತು. ಮೇಷ್ಟರು ನನ್ನ ಹತ್ತಿರ ಬಂದು ಚಿತ್ರವನ್ನು ಕಿತ್ತುಕೊಂಡು ನೋಡಿದರು. ಅವರಿಗೆ ನಗುಬಂತು. ಆಮೇಲೆ ಗಂಭೀರವಾಗಿ ಹೊರಗೆ ಹೋದರು. ಕೆಲವು ನಿಮಿಷಗಳಾದಮೇಲೆ ಮತ್ತೆ ಬಂದು, ಹೋಗಿ ಹೆಡ್‌ಮೇಷ್ಟರರನ್ನು ನೋಡಬೇಕೆಂದು ಅಪ್ಪಣೆ ಮಾಡಿದರು.





ಹೆಡ್‌ಮೇಷ್ಟರ ಕೋಣೆಗೆ ಹೋದೆ, ಅವರ ಮೇಜಿನ ಮೇಲೆ ನನ್ನ ಚಿತ್ರವಿದ್ದದ್ದು ಕಾಣಿಸಿತು. ಹೆಡ್‌ಮೇಷ್ಟರು ಕೋಪದಲ್ಲಿದ್ದರು, "ಈ ಚಿತ್ರಬರೆದದ್ದು ನೀನೇನೋ?" ಎಂದು ಕೇಳಿದರು.

"ಹೌದು, ಸಾರ್" ಅಂದೆ.

"ನೀನೆ ಬರೆದದ್ದು?" ಎಂದು ಗುಡುಗಿ, ಕೈ ಹಿಡಿದುಕೊಂಡು ಬೆತ್ತದಿಂದ ಎರಡು ಬಾರಿಸಿದರು. "ನೀನೇ ಬರೆದದ್ದು?" ಎಂದು ಇನ್ನೊ ಒಮ್ಮೆ ಕೇಳಿ "ಇನ್ನು ಎರಡು ವಾರ ನೀನು ತರಗತಿಯೊಳಕ್ಕೆ ಕಾಲಿಡೋ ಹಾಗಿಲ್ಲ, ನಡೀ ಆಚೆ" ಎಂದು ಅರಚಿದರು.

ಹೊರಬಂದೆ. ಏನು ಮಾಡುವುದೆಂದು ಗೊತ್ತಾಗಲಿಲ್ಲ. ಆ ಕೂಡಲೇ ಮನೆಗೆ ಹೋಗಿ ಅಜ್ಜನನ್ನು ಎದುರಿಸುವ ಹಾಗಿರಲಿಲ್ಲ.

ಮಧ್ಯಾಹ್ನದ ಊಟದ ಬಿಡುವಿನವರೆಗೂ ತರಗತಿಯ ಹೊರಗಡೆ ಕಾಯುತ್ತಿದ್ದೆ.

ಹೆಡ್‌ಮೇಷ್ಟರ ಚಿತ್ರ ಬರೆದದ್ದಕ್ಕೆ ನನಗೆ ಶಿಕ್ಷೆಯಾಯಿತು ಅನ್ನುವ ಸುದ್ದಿ ಶಾಲೆಯಲ್ಲೆಲ್ಲಾ ಹರಡಿತು. ಬಿಡುವಿನ ವೇಳೆಯಲ್ಲಿ ಹಲವಾರು ಹುಡುಗರು ನನ್ನ ಬಳಿ ಓಡಿಬಂದರು. ಕೆಲವರು ನನಗೆ ಸಮಾಧಾನ ಮಾಡಿದರು. ಇನ್ನು ಕೆಲವರು ಹೆಡ್‌ಮೇಷ್ಟರ ವಿರುದ್ಧ ಕಾರ್ಯಕ್ರಮ ಕೈಗೊಳ್ಳಬೇಕು ಅಂದರು. ಒಬ್ಬ "ಅವರ ಕುರ್ಚಿಯ ಕೆಳಗೆ ಪಟಾಕಿಯಿಟ್ಟು ಹಾರಿಸೋಣ" ಎಂದು ಸಲಹೆಕೊಟ್ಟ. ಇನ್ನೊಬ್ಬ "ಅವರ ಬಾಗಿಲಿಗೆ ಶಾಯಿ ಕುಡಿಕೆ ಕಟ್ಟೋಣ" ಅಂದ. ಕೆಲವರು ಹರತಾಳದ ಯೋಚನೆಯನ್ನು ಮಾಡಿದರು. ಆದರೆ ನಾನು ಮಧ್ಯಾಹ್ನದ ಊಟಕ್ಕೆ ಮನೆಗೆ ಹೋಗಬೇಕಾಗಿತ್ತು.

ಅಜ್ಜಿ ಊಟ ಬಡಿಸುತ್ತಿದ್ದಾಗ ಹೆಡ್‌ಮೇಷ್ಟರು ಬಂದು ಅಜ್ಜನ ಭೇಟಿ ಮಾಡಿದರು. ಅವರು ಏನು ಮಾಡುತ್ತಾರೆಂದು ಕೇಳಲು ಬಾಗಿಲ ಹಿಂದೆ ಅವಿತುಕೊಂಡು ಕುಳಿತೆ. ನಾನು ತರಗತಿಯಲ್ಲಿ ಸರಿಯಾಗಿಲ್ಲ, ಇಡೀ ಒಂದು ಪೀರಿಯೆಡನ್ನು ತಮ್ಮ ಚಿತ್ರ ಬರೆಯುವುದರಲ್ಲಿ ಕಳೆದೆ ಎಂದು ಹೆಡ್‌ಮೇಷ್ಟರು ದೂರು ಹೇಳಿದರು. ಚಿತ್ರವನ್ನು ತೆಗೆದು ಅಜ್ಜನ ಕೈಗಿಟ್ಟರು. ಅಜ್ಜ ಚಿತ್ರ ನೋಡಿ ಗೊಳ್ಳನೆ ನಗ ತೊಡಗಿದರು.

"ಇದನ್ನು ನಮ್ಮ ರಾಜ ಬರೆದನೆ?" –ಅಜ್ಜ ಕೇಳಿದರು. ಹೆಡ್‌ಮೇಷ್ಟರು "ಹೌದು" ಅಂದರು. ಅಜ್ಜ ಮತ್ತೊಮ್ಮೆ ನಕ್ಕು, ಅಜ್ಜಿಯನ್ನೂ ಚಿಕ್ಕಪ್ಪನನ್ನೂ "ಚಿತ್ರ ನೋಡಬನ್ನಿ" ಎಂದು ಕರೆದರು.

"ರಾಜ ಈ ಚಿತ್ರ ಬರೆದು ಏನಾದರೂ ತಪ್ಪು ಮಾಡಿದ್ದಾನೆ ಅಂತ ನಿಮಗೆ ಅನ್ನಿಸುತ್ತೆ?" – ಅಜ್ಜ ಹೆಡ್‌ಮೇಷ್ಟರನ್ನು ಕೇಳಿದರು.

"ಖಂಡಿತವಾಗಿ. ಅಲ್ಲದೆ ನಾನು ಪಾಠ ತೊಗೊಂಡಿದ್ದ ಪೀರಿಯಡ್ಡಿನಲ್ಲೇ ಮಾಡಿದ." –ಹೆಡ್‌ಮೇಷ್ಟರು ಉತ್ತರ ಕೊಟ್ಟರು.

"ಆದರೆ ಚಿತ್ರ ನನಗೆ ಮೆಚ್ಚಿಗೆಯಾಯಿತು, ನೋಡಿ ಹುಡುಗ ಇಷ್ಟೆಲ್ಲಾ ಜಾಣ ಅಂತ ನನಗೆ ಗೊತ್ತಿರಲಿಲ್ಲ"– ಅಜ್ಜ ಹೇಳಿದರು.

ಹೆಡ್‌ಮೇಷ್ಟರು ಕೊಂಚ ಹೊತ್ತು ಕಾದು ನೋಡಿದರು. ಆ ಮೇಲೆ ತಾವೂ ನಗುತ್ತಾ "ಅಲ್ಲವೆ ಮತ್ತೆ? ಅವನು ಜಾಣನೇಯೇ. ಅದಕ್ಕೋಸ್ಕರವೇ ನಿಮಗೆ ಚಿತ್ರ ತೋರಿಸೋಣ ಅಂತ ತಂದದ್ದು" ಅಂದರು.

ಹೆಡ್‌ಮೇಷ್ಟರು ಏಕಾಏಕಿ ತಮ್ಮ ಧ್ವನಿಯನ್ನೇಕೆ ಬದಲಾಯಿಸಿದರು ಎಂದು ಮಾತ್ರ ನನಗೆ ಅರ್ಥವಾಗಲಿಲ್ಲ.



# ಅದೃಷ್ಟದ ಆಟ

ನಮ್ಮ ಊರಿನ ದೊಡ್ಡ ದೇವಸ್ಥಾನವೊಂದರಲ್ಲಿ ಪ್ರತಿ ವರ್ಷವೂ ಮಳೆಗಾಲದಲ್ಲಿ ಒಂದು ಉತ್ಸವ ನಡೆಯುತ್ತಿತ್ತು. ಉತ್ಸವದ ವಿಶೇಷವೆಂದರೆ ಆಟಕ್ಕಾಗಿ ಆಡುತ್ತಿದ್ದ ಕಾಳಗ. ಕಾಳಗ ನಡೆಯುತ್ತಿದ್ದದ್ದು ಎರಡು ಗುಂಪುಗಳ ನಡುವೆ – ದೇವಸ್ಥಾನದ ಪಶ್ಚಿಮಕ್ಕೆ ವಾಸಿಸುತ್ತಿದ್ದವರಿಗೂ, ಪೂರ್ವಕ್ಕೆ ವಾಸಿಸುತ್ತಿದ್ದವರಿಗೂ. ನೂರಾರು ಜನ ಕತ್ತಿಗುರಾಣಿ ಹಿಡಿದು ಬಂದು ದೊಡ್ಡ ಮೈದಾನದ ಎರಡೂ ಕಡೆ ಸೇರುತ್ತಿದ್ದರು. ಒಂದು ಗೊತ್ತಾದ ಸನ್ನೆ ಮಾಡಿದಾಗ ಎರಡು ಗುಂಪಿನವರೂ ಒಬ್ಬರು ಇನ್ನೊಬ್ಬರ ಮೇಲೆ ನುಗ್ಗಿ ಹೋಗಿ ಕಾದಾಟಕ್ಕೆ ಷುರುಮಾಡುತ್ತಿದ್ದರು. ಆ ಕಾದಾಟದಲ್ಲಿ ಯಾರಿಗೂ ಗಾಯವಾಗುತ್ತಿರಲಿಲ್ಲ. ನೂರಾರು ವರ್ಷಗಳ ಹಿಂದೆ ಯಾರೋ ಇಬ್ಬರು ದೊರೆಗಳ ನಡುವೆ ಆ ಸ್ಥಳದಲ್ಲಿ ಆಗಿದ್ದ ಒಂದು ನಿಜವಾದ ಕಾಳಗದ ನೆನಪಾಗಿ ಈ ಕಾಳಗದ ಆಟ ನಡೆಯುತ್ತಿತ್ತು. ಅದನ್ನು ಆಡಲು ಜನರಿಗೆ ವಿಶೇಷ ತರಪೇತಿ ಕೊಡುತ್ತಿದ್ದರು.

ಉತ್ಸವದ ಸಮಯದಲ್ಲಿ ಒಂದು ದೊಡ್ಡ ಜಾತ್ರೆ ಸೇರುತ್ತಿತ್ತು. ಅನೇಕ ದಿನ ನಡೆಯುತ್ತಿತ್ತು. ದೇಶದ ನಾನಾ ಕಡೆಗಳಿಂದ ವ್ಯಾಪಾರಿಗಳು ಬಗೆಬಗೆಯ ಸಾಮಾನುಗಳನ್ನು ಮಾರಲು ತರುತ್ತಿದ್ದರು. ನೂರಾರು ಅಂಗಡಿಗಳನ್ನು ಹಾಕುತ್ತಿದ್ದರು. ಹಲವಾರು

ಪೇಟೆಗಳನ್ನು ತೆರೆಯುತ್ತಿದ್ದರು. ಜನ ವರ್ಷಪೂರ್ತಿ ತಮಗೆ ಬೇಕಾಗುವ ಸಾಮಾನು ಸರಂಜಾಮುಗಳನ್ನು ಕೊಳ್ಳಲು ಈ ಜಾತ್ರೆ ನಡೆಯುವುದನ್ನೇ ಕಾಯುತ್ತಿದ್ದರು. ಸಣ್ಣ ಸೂಜಿಯಿಂದ ಹಿಡಿದು ದೊಡ್ಡ ಆನೆಯವರೆಗೂ ಏನು ಬೇಕಾದರೂ ಅಲ್ಲಿ ಕೊಳ್ಳಲು ಸಿಗುತ್ತಿತ್ತು.

ನಾನು ಒಂದು ಛತ್ರಿ ಕೊಂಡುಕೊಳ್ಳಬೇಕಾಗಿತ್ತು. ಅದಕ್ಕಾಗಿ ಜಾತ್ರೆಗೆ ಹೋಗಬಯಸಿದೆ. ಅಜ್ಜಿ ಎರಡು ರೂಪಾಯಿ ಕೊಟ್ಟರು. ಜಾತ್ರೆಗೆ ಕರೆದುಕೊಂಡು ಹೋಗುವಂತೆ ಚಿಕ್ಕಪ್ಪನನ್ನು ಕೇಳಿದೆ.

"ಎರಡು ರೂಪಾಯಿ ಇಟ್ಟುಕೊಂಡು ಜಾತ್ರೆಗೆ ಹೋಗುವುದೇನೋ? ಎರಡು ರೂಪಾಯಿಯಲ್ಲಿ ಏನು ಬರುತ್ತೆ? ನಿನಗೆ ಕೊಳ್ಳಬೇಕು ಅನಿಸುವುದು ಅದೆಷ್ಟೋ ಇರುತ್ತೆ" ಎಂದು ಚಿಕ್ಕಪ್ಪ ಹೇಳಿದ.

ಇದು ಅಜ್ಜಿಗೆ ಕೇಳಿಸಿತು. "ಬೇಕಾದ್ದನ್ನು ತೊಗೋ" ಎಂದು ಅವಳು ಇನ್ನೆರಡು ರೂಪಾಯಿ ಕೊಟ್ಟಳು.

ಚಿಕ್ಕಪ್ಪ ಜಾತ್ರೆಗೆ ಕರೆದುಕೊಂಡು ಹೋದ. ಜೊತೆಗೆ ನಮ್ಮ ಆಳೂ ಬಂದ.

ಜಾತ್ರೆಯಲ್ಲಿ ತುಂಬ ಜನಸಂದಣಿ. ಗುಂಪಿನ ನಡುವೆ ದಾರಿ ತೋರಿಸುತ್ತ ಚಿಕ್ಕಪ್ಪ ಮುಂದೆ ನಡೆಯುತ್ತಿದ್ದ. ಆಗ ಅಲ್ಲಿ ಅವನ ಕೆಲವರು ಸ್ನೇಹಿತರು ಸಿಕ್ಕಿದರು. ಅವನು ತಮ್ಮೊಂದಿಗೆ ಸ್ವಲ್ಪ ಹೊತ್ತು ಕಳೆಯಲೆಂದು ಅವರು ಅಪೇಕ್ಷಿಸಿದರು.

"ನಾನು ವಾಪಸು ಬರುವವರೆಗೂ ಆಳಿನ ಸಂಗಡ ಜಾತ್ರೆಯಲ್ಲಿ ಒಂದು ಸುತ್ತು ಹಾಕಿ ಬರ್‍ತೀಯಾ?" ಎಂದು ಚಿಕ್ಕಪ್ಪ ಕೇಳಿದ. ನನಗೆ ಸಂತೋಷವಾಯಿತು. ತಾನು ಜೊತೆಯಲ್ಲಿಲ್ಲದಾಗ ಏನನ್ನೂ ಕೊಳ್ಳಕೂಡದೆಂದು ಚಿಕ್ಕಪ್ಪ ಎಚ್ಚರಿಸಿದ. "ಆಗಲಿ, ನಿನಗೆ ಕಾಯ್ತೀನಿ" ಎಂದು ಮಾತುಕೊಟ್ಟೆ.

ನಾನೂ ಆಳೂ ಅಂಗಡಿಯಿಂದ ಅಂಗಡಿಗೆ ಹೋದೆವು. ಅಲ್ಲಿ ನಾನು ಕೊಳ್ಳಬಯಸಿದ್ದ ಎಷ್ಟೋ ಸಾಮಾನುಗಳಿದ್ದವು. ಆದರೆ ಚಿಕ್ಕಪ್ಪ ಬರಲೆಂದು ಕಾದೆ.

ಆ ಮೇಲೆ ನಾವೊಂದು ಅಂಗಡಿಗೆ ಬಂದೆವು. ಅದರ ಹೆಸರು "ಅದೃಷ್ಟದ ಅಂಗಡಿ". ಅಂಗಡಿಯವನು ಒಳ್ಳೆಯವನಂತೆ ಕಾಣಿಸಿದ. ಎಲ್ಲರೂ ತಮ್ಮ ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳಲೆಂದು ಅವನು ಅಪೇಕ್ಷಿಸಿದ; ಅದೃಷ್ಟಶಾಲಿಗಳಾಗುವುದು ಹೇಗೆಂದು ನಮಗೆ ವಿವರಿಸಿದ: "ಬಲು ಸುಲಭ. ಒಂದರಿಂದ ಮೂವತ್ತಾರರವರೆಗೆ ಅಂಕಿಯಿರುವ ಮೂವತ್ತಾರು ಬಹುಮಾನಗಳಿವೆ. ಹಾಗೆಯೇ ಒಂದರಿಂದ ಆರರವರೆಗೆ ಅಂಕಿಯಿರುವ ಮೂವತ್ತಾರು ಬಿಲ್ಲೆಗಳಿವೆ. ಅಂದರೆ ಒಂದೊಂದು ಅಂಕಿಯೂ ಆರಾರು ಬಿಲ್ಲೆಗಳ ಮೇಲೆ ಬಂದಿದೆ. ಬಿಲ್ಲೆಗಳನ್ನು ಮೇಜಿನ ಮೇಲೆ ಮುಖ ಕೆಳಗೆ ಮಾಡಿಇಟ್ಟಿದೆ. ನೀವು ಮಾಡಬೇಕಾದ್ದು ಇಷ್ಟೇ. ಎಂಟಾಣೆ ಕೊಟ್ಟು ಯಾವುದಾದರೂ ಆರು ಬಿಲ್ಲೆಗಳನ್ನು ಎತ್ತಿ ಅವುಗಳ ಮೇಲಿರುವ ಅಂಕಿಗಳೆಲ್ಲವನ್ನೂ ಕೂಡಿ, ಒಟ್ಟಿನ ಮೊತ್ತ ಕಂಡು ಹಿಡಿಯಿರಿ. ಆ ಮೊತ್ತದ ಅಂಕಿಯಿರುವ ಬಹುಮಾನ ನಿಮಗೆ ಸಿಗುತ್ತದೆ." ಅವನು ಇನ್ನೂ ಮುಂದುವರಿಸಿದ: "ಯಾರಿಗೂ ನಿರಾಶೆಯಾಗುವುದಿಲ್ಲ. ಪ್ರತಿಯೊಬ್ಬರಿಗೂ ಒಂದಲ್ಲ ಒಂದು ಬಹುಮಾನ ಸಿಕ್ಕೇ ಸಿಗುತ್ತದೆ. ಒಂದೊಂದು ಬಹುಮಾನದ ಬೆಲೆಯೂ ನಾಲ್ಕಾಣೆಯಿಂದ ಐವತ್ತು ರೂಪಾಯಿಗಳಷ್ಟು. ಅದೃಷ್ಟವಿದ್ದವರಿಗೆ ಹೆಚ್ಚು ಬೆಲೆಬಾಳುವ ಬಹುಮಾನ ಸಿಗುತ್ತದೆ. ಇದು ಅದೃಷ್ಟದ ಆಟ. ಬನ್ನಿ, ನಿಮ್ಮ ಅದೃಷ್ಟ ಪರೀಕ್ಷಿಸಿ ನೋಡಿ."



ಒಬ್ಬ ಮುದುಕ ಎಂಟಾಣೆ ಕೊಟ್ಟು ಆರು ಬಿಲ್ಲೆ ಆರಿಸಿದ. ಅವುಗಳ ಮೇಲಿದ್ದ ಅಂಕಿಗಳನ್ನು ಕೂಡಿದ. ಮೊತ್ತ ಒಂಬತ್ತು ಬಂತು. ಅವನಿಗೆ ಒಂಬತ್ತನೇ ನಂಬರಿನ ಸಾಮಾನು ಸಿಕ್ಕಿತು. ಅದೊಂದು ಸುಂದರವಾದ ಗಡಿಯಾರ. ಆದರೆ ಆ ಮುದುಕನಿಗೆ ಗಡಿಯಾರ ಬೇಕಾಗಿರಲಿಲ್ಲ. ಅಂಗಡಿಯ ಮಾಲಿಕ ತಾನೇ ಆ ಗಡಿಯಾರವನ್ನು ಮುದುಕನಿಂದ ನಾಲ್ಕು ರೂಪಾಯಿಗಳಿಗೆ ಕೊಂಡು ಉಪಕಾರಮಾಡಿದ. ಮುದುಕ ತುಂಬ ಸಂತೋಷಪಟ್ಟು ಕೊಂಡು ಹೋದ.

ಆ ಮೇಲೆ ನನಗಿಂತ ಸ್ವಲ್ಪ ವಯಸ್ಸಾದ ಒಬ್ಬ ಹುಡುಗ ತನ್ನ ಅದೃಷ್ಟ ನೋಡಿದ. ಅವನೂ ಎಂಟಾಣೆಕೊಟ್ಟು, ಆರು ಬಿಲ್ಲೆ ಎತ್ತಿದ. ಅವುಗಳ ಅಂಕಿ ಕೂಡಿದ. ಮೊತ್ತ ಹದಿನೈದಾಯಿತು. ಆ ಅಂಕಿಯಿದ್ದ ಸಾಮಾನು ನಾಲ್ಕಾಣೆ ಬೆಲೆಬಾಳುವ ಬಾಚಣಿಗೆ. ಅಂಗಡಿಯವನು ಆ ಹುಡುಗನ ಮೇಲೆ ದಯೆಯಿಟ್ಟು ತಾನೇ ಅದನ್ನು ನಾಲ್ಕಾಣೆಗೆ ಕೊಂಡ. ಹುಡುಗ ಮತ್ತೊಮ್ಮೆ ತನ್ನ ಅದೃಷ್ಟ ಪರೀಕ್ಷಿಸಿದ. ಈ ಸಲ ಮೂರು ರೂಪಾಯಿ ಬೆಲೆಯ ಒಂದು ಪೆನ್ನು ಸಿಕ್ಕಿತು. ಮತ್ತೆ ಮೂರನೆಯ ಸಲ ಪ್ರಯತ್ನಿಸಿದಾಗ ಹತ್ತು ರೂಪಾಯಿಯ ಕೈಗಡಿಯಾರ ಗಿಟ್ಟಿತು. ನಾಲ್ಕನೆಯ ಪ್ರಯತ್ನದಲ್ಲಿ ನಲವತ್ತು ರೂಪಾಯಿಗೂ ಹೆಚ್ಚು ಬೆಲೆಬಾಳುವ ಮೇಜು ದೀಪ (ಟೇಬಲ್‌ಲ್ಯಾಂಪ್) ಸಿಕ್ಕಿತು. ಹುಡುಗನ ಆನಂದ ಹೇಳತೀರದು. ಮುಗುಳು ನಗೆ ಬೀರುತ್ತ ಹೋದ.

ನನಗೂ ಅದೃಷ್ಟ ನೋಡುವ ಚಪಲವಾಯಿತು. ಆಳಿನ ಕಡೆ ನೋಡಿದೆ. ಅವನು ಹುರಿದುಂಬಿಸಿದ. ಎಂಟಾಣೆ ಕೊಟ್ಟು ಆರು ಬಿಲ್ಲೆ ಎತ್ತಿದೆ. ನನ್ನ ಅದೃಷ್ಟ ಅಷ್ಟು ಚೆನ್ನಾಗಿರಲಿಲ್ಲ. ಬಂದದ್ದು ಎರಡು ಪೆನ್ಸಿಲ್ಲು. ಅಂಗಡಿಯವನು ಅವನ್ನು ನಾಲ್ಕಾಣೆಗೆ ಕೊಂಡ. ಇನ್ನೊಂದು ಕೈನೋಡಿದೆ. ಈ ಸಲ ಅಷ್ಟೇ ಕಡಿಮೆ ಬೆಲೆಯ ಶಾಯಿಕುಡಿಕೆ ಬಂತು. ಅಂಗಡಿಯವನು ಅದನ್ನೂ ಕೊಂಡ. ಮೂರನೆಯ ಪ್ರಯತ್ನ ಮಾಡಿದೆ. ಆಗಲೂ ಅದೃಷ್ಟ ಸಾಲದಾಗಿತ್ತು.

ಯಾವುದಾದರೊಂದು ಭಾರೀ ಬಹುಮಾನ ಗೆಲ್ಲುವ ಆಸೆ ನನ್ನದು. ಒಂದೊಂದು ಸಲವೂ ಎಂಟುಎಂಟಾಣೆ ಕೊಡುತ್ತ, ಅದೃಷ್ಟ ಪರೀಕ್ಷೆಯನ್ನು ಮುಂದುವರಿಸಿದೆ. ಒಂದೊಂದುಸಲವು ಏನಾದರೊಂದು ಜುಜುಬಿ ಸಾಮಾನೇ ಸಿಗುತ್ತಿತ್ತು. ಕೊನೆಗೆ ನನ್ನಲ್ಲಿ ನಾಲ್ಕಾಣೆ ಉಳಿದಿತ್ತು. ಆಗಲೂ ಅಂಗಡಿಯವನು ದಯೆ ತೋರಿದ. ಆ ನಾಲ್ಕಾಣೆಯಲ್ಲಿಯೇ ಇನ್ನೊಂದು ಆಟ ಆಡಿ, ಬಹುಮಾನ ಬಂದ ಮೇಲೆ ಲೆಕ್ಕ ತೀರಿಸಬಹುದು ಅಂದ. ಮತ್ತೆ ಆಡಿದೆ. ಕೊನೆಯ ನಾಲ್ಕಾಣೆಯೂ ಮಾಯವಾಯಿತು.

ಜನ ನನ್ನನ್ನೇ ನೋಡುತ್ತಿದ್ದರು. ಕೆಲವರು ನನ್ನ ದುರದೃಷ್ಟಕ್ಕೆ ನಕ್ಕರು. ಯಾರೊಬ್ಬರೂ ಸ್ವಲ್ಪವೂ ಸಹಾನುಭೂತಿ ತೋರಿಸಲಿಲ್ಲ. ಆಳೂ ನಾನೂ ಚಿಕ್ಕಪ್ಪ ನಮ್ಮನ್ನು ಬಿಟ್ಟುಹೋಗಿದ್ದ ಸ್ಥಳಕ್ಕೆ ಬಂದು ಅವನ ದಾರಿ ಕಾದೆವು.

ಅಷ್ಟರಲ್ಲಿಯೇ ಚಿಕ್ಕಪ್ಪ ಬಂದ. ನನ್ನನ್ನು ನೋಡಿ: "ಯಾಕೋ ರಾಜ, ಏನೋ ಒಂದು ಬಗೆಯಾಗಿದ್ದೀಯಲ್ಲೋ? ಏನು ಸಮಾಚಾರ?" ಅಂದ.



ನಾನು ಮಾತನಾಡಲಿಲ್ಲ. ಆಳು ನಡೆದದ್ದನ್ನೆಲ್ಲಾ ಹೇಳಿದ.

ಚಿಕ್ಕಪ್ಪನಿಗೆ ಮೊದಲು ಕೋಪ ಬಂತು. ಆ ಮೇಲೆ ನಸುನಗುತ್ತ ಬೆನ್ನು ತಟ್ಟಿದ. ಒಂದು ಅಂಗಡಿಗೆ ಕರೆದುಕೊಂಡು ಹೋಗಿ ಒಳ್ಳೆಯ ಛತ್ರಿ ಕೊಡಿಸಿದ. ಬಿಸ್ಕತ್ತು, ಮಿಠಾಯಿ, ಇನ್ನೂ ಏನೇನೋ ಸಣ್ಣಪುಟ್ಟ ಉಡುಗೊರೆಗಳನ್ನು ಕೊಡಿಸಿದ. ಆ ಮೇಲೆ ಮನೆಗೆ ಬಂದೆವು.

ಮನೆ ತಲಪಿದ ಮೇಲೆ ಆ ಅದೃಷ್ಟದ ಅಂಗಡಿಯವನು ನನಗೆ ಮಂಕುಬೂದಿ ಎರಚಿದನೆಂದು ಹೇಳಿದ.

"ಇಲ್ಲ, ಚಿಕ್ಕಪ್ಪ. ನನಗೆ ಅದೃಷ್ಟವಿರಲಿಲ್ಲ, ಅಷ್ಟೇ" ಎಂದು ನಾನಂದೆ.

"ಹಾಗಲ್ಲ, ಮಗೂ, ಅದರಲ್ಲಿ ಅದೃಷ್ಟ, ಗಿದೃಷ್ಟ ಒಂದೂ ಇಲ್ಲ."

"ಆದರೆ ನನ್ನ ಕಣ್ಣೆದುರಿಗೇ ಒಬ್ಬ ಮುದುಕನಿಗೆ ಒಂದು ಗಡಿಯಾರ ಸಿಕ್ಕಿತು, ಚಿಕ್ಕಪ್ಪ. ಇನ್ನೊಬ್ಬ ಹುಡುಗನಿಗೆ ಎರಡು ಮೂರು ಬೆಲೆಬಾಳುವ ಸಾಮಾನುಗಳು ಸಿಕ್ಕಿದವು."

"ನೀನು ಕಾಣೆ, ಮಗೂ" –ಚಿಕ್ಕಪ್ಪ ವಿವರಿಸಿದ. "ಅವರೆಲ್ಲರೂ ಅಂಗಡಿಯವನ ಸ್ನೇಹಿತರೇ. ಎಲ್ಲರೂ ಸೇರಿ ನಿನ್ನಲ್ಲಿ ಅದೃಷ್ಟ ನೋಡುವ ಆಸೆ ಹುಟ್ಟಿಸೋದಕ್ಕೆ ಹೂಡಿದ ತಂತ್ರ ಅದು. ಅವರಿಗೆ ಬೇಕಾಗಿದ್ದು ನಿನ್ನ ದುಡ್ಡು. ಅದನ್ನು ಅವರು ಕಸಿದುಕೊಂಡರು. ಹೋಗಲಿ, ಈಗ ಆಗಿ ಹೋದದ್ದನ್ನು ಮರೆತುಬಿಡು. ನಿನ್ನ ದುರದೃಷ್ಟ ಅಥವಾ ಬೆಪ್ಪುತನದ ವಿಷಯ ಯಾರಿಗೂ ಹೇಳೋಕ್ಕೆ ಹೋಗಬೇಡ."

●



## ರಾಣಿಯ ಸಂಕಟ

ಒಂದು ದಿನ ನಮ್ಮ ಅತ್ತೆಯ ಮನೆಗೆ ಹೋಗಿದ್ದೆ. ಹೊರಗೆ ತೋಟದಲ್ಲಿ ಒಂದು ನಾಯಿ ಒಂದು ಅಳಿಲ ಮರಿಯನ್ನು ಅಟ್ಟಿಸಿಕೊಂಡು ಹೋಗುತ್ತಿದ್ದದ್ದು ಕಾಣಿಸಿತು. ಓಡಿಹೋಗಿ, ನಾಯಿಗೆ ಸಿಕ್ಕಿ ಬೀಳುವ ಮುಂಚೆಯೇ ಅಳಿಲನ್ನು ಹಿಡಿದುಕೊಂಡೆ. ಅದೊಂದು ಪುಟ್ಟಾಣಿ ಅಳಿಲ ಮರಿ. ಭಯದಿಂದ ಅದರ ಮೈ ತರತರನೆ ನಡುಗುತ್ತಿತ್ತು. ಅಳಿಲಮರಿ ನನಗೆ ಇಷ್ಟವಾಯಿತು. ಅದನ್ನು ಮನೆಗೆ ತೊಗೊಂಡು ಬಂದೆ.

ಅಜ್ಜಿಗೆ ಮನೆಯಲ್ಲಿ ಅಳಿಲು ಸಾಕುವುದು ಸರಿಬೀಳಲಿಲ್ಲ. ಅದರ ಪಾಡಿಗೆ ಅದನ್ನು ಬಿಟ್ಟುಬಿಡಬೇಕೆಂದು ಅವಳ ಮನಸ್ಸು. "ಅದಿನ್ನೂ ತೀರಾ ಮರಿ ಕಣೋ. ರೋಗ ಬೇರೆ ಹತ್ತಿದೆ. ಬೇಗ ಸತ್ತು ಹೋಗುತ್ತೆ, ನೋಡ್ತಿರು" ಅಂದಳು.

"ಹೌದು, ಅದು ಮರಿಯೇ, ರೋಗವೂ ತಗಲಿದೆ. ಅಂತಾನೇ ಅದಕ್ಕೆ ಶುಶ್ರೂಷೆ ಮಾಡಬೇಕು. ನಾನಿಟ್ಟುಕೊಂಡು ನೋಡಿಕೊಳ್ತೀನಿ" ಎಂದು ನಾನು ಹೇಳಿದೆ.

"ಅದನ್ನ ನೀನು ಯಾಕೆ ಇಟ್ಟುಕೊಳ್ಳಬೇಕೋ ?" –ಹಿಂದಿನಿಂದ ಅಜ್ಜನ ಧ್ವನಿ ಕೇಳಿಬಂತು. "ನೀನು ಅವುಗಳ ಮರಿಯನ್ನು ತೊಗೊಂಡು ಹೋದೆ ಅಂತ ಅದರ ಅಪ್ಪ ಅಮ್ಮ ಈಗ ಅಳುತ್ತಾ ಇರುತ್ತವೆ, ಗೊತ್ತೆ ?"

"ಆದರೆ ಅತ್ತೆಯ ಮನೆಯಲ್ಲಿ ನಾನದನ್ನು ಒಂದು ನಾಯಿಯ ಬಾಯಿಯಿಂದ ಬದುಕಿಸಿದೆನಲ್ಲಾ, ಅಜ್ಜ, ಅಲ್ಲೇ ಬಿಟ್ಟುಬಂದಿದ್ದರೆ ನಾಯಿ ಅದನ್ನು ಸಾಯಿಸಿ ಬಿಡುತ್ತಿತ್ತು" – ನಾನಂದೆ.

ಅಜ್ಜ ಬಂದು ಅಳಿಲನ್ನು ನೋಡಿದರು. ಹೆಚ್ಚು ಮಾತಾಡದೆ ಹೊರಟುಹೋದರು. ಅಳಿಲು ಸಾಕಲು ಅಜ್ಜನ ಒಪ್ಪಿಗೆಯಿತ್ತೆಂದು ಅದರ ಅರ್ಥ. ಈಗ ಅಜ್ಜಿ ಬೇಡ ಅನ್ನುವ ಹಾಗಿರಲಿಲ್ಲ. ಅಳಿಲ ಮರಿಯ ಮೈ ಸವರಿ ಅದಕ್ಕೆ "ರಾಣಿ" ಎಂದು ಹೆಸರಿಟ್ಟೆ.

ಅಳಿಲನ್ನು ಇಡಲು ಮನೆಯಲ್ಲೆಲ್ಲೂ ಸರಿಯಾದ ಸ್ಥಳವಿರಲಿಲ್ಲ. ಒಂದು ಕಾಗದದ ಪೆಟ್ಟಿಗೆ ಹುಡುಕಿ, ಗಾಳಿಯಾಡಲು ಅನುಕೂಲವಾಗುವಂತೆ ಅದರ ಎರಡೂ ಬದಿ ತೂತು ಕೊರೆದು, ಆ ರಾತ್ರಿ ಅಳಿಲನ್ನು ಅದರಲ್ಲಿಟ್ಟೆ. ಮೂರನೆಯದಿನ ಚಿಕ್ಕಪ್ಪ ಹಕ್ಕಿ ಸಾಕುವ



ಒಂದು ಪಂಜರ ಕೊಂಡುಕೊಟ್ಟೆ. ರಾಣಿಯನ್ನು ಆ ಪಂಜರದಲ್ಲಿಟ್ಟು ನನ್ನ ಕೋಣೆಯ ಮಾಡಿಗೆ ತೂಗುಹಾಕಿದೆ. ಪಂಜರ ಅದಕ್ಕೆ ಒಳ್ಳೆಯ ಮನೆಯಾಗುವಂತೆ ಮಾಡಿದೆ. ಅದಕ್ಕೆ ಮಲಗಲು ಒಂದು ಪುಟ್ಟ ಹಾಸಿಗೆ ತಯಾರಿಸಿದೆ. ಆಹಾರ ನೀರುಗಳಿಗೆ ಪುಟ್ಟ ತಟ್ಟೆಲೋಟ ಹೊಂದಿಸಿ ಪಂಜರದೊಳಗಿಟ್ಟೆ.

ಮೊದಮೊದಲು ಅಳಿಲಿಗೆ ನಾನೇ ಆಹಾರ ತಿನ್ನಿಸಬೇಕಾಯಿತು. ಆಮೇಲೆ ಕೆಲವು ದಿನಗಳಲ್ಲಿ ತಾನೇ ಆಹಾರ ತಿನ್ನತೊಡಗಿತು. ಅದಕ್ಕೆ ಹಣ್ಣುಕಾಯಿ, ಹಾಲು ಕೊಡುತ್ತಿದ್ದೆ.

ಅಳಿಲು ದೊಡ್ಡದಾಗಿ ಬೆಳೆದು, ಅಲ್ಲಿಂದಿಲ್ಲಿಗೆ ಓಡಾಡುತ್ತಾ ನನ್ನೊಂದಿಗೆ ಆಟ ಆಡುವಂತಾಯಿತು. ಹೆಸರು ಹಿಡಿದು ಕರೆದಾಗ ನನ್ನ ಹತ್ತಿರ ಓಡಿ ಬರುತ್ತಿತ್ತು. ನಾನು ಎಲ್ಲಿ ಹೋದರೂ ನನ್ನನ್ನು ಹಿಂಬಾಲಿಸುತ್ತಿತ್ತು.

ಒಂದು ದಿನ ಅದನ್ನು ತೋಟಕ್ಕೆ ಕರೆದುಕೊಂಡು ಹೋದೆ. ಅದಕ್ಕೆ ಸಂತೋಷವಾಯಿತು. ಗಿಡಗಂಟೆಗಳ ನಡುವೆ ಓಡಾಡಿತು. ಆಮೇಲೆ ಒಂದು ಮರ ಹತ್ತಿ, ಎಲೆಗಳ ಮಧ್ಯೆ ಮರೆಯಾಯಿತು. ಆದರೆ ಕರೆದ ಕೂಡಲೇ ಇಳಿದು ಬಂತು.

ರಾಣಿ ದೊಡ್ಡದಾದಂತೆ ಅದು ತನಗೆ ಬೇಕಾದಲ್ಲಿ ಓಡಾಡಲು ಬಿಟ್ಟೆ. ಇಷ್ಟಬಂದಾಗ ಹೋಗಿ ಬರಲು ಅನುಕೂಲವಾಗುವಂತೆ ಪಂಜರದ ಬಾಗಿಲನ್ನು ಯಾವಾಗಲೂ ತೆರೆದೇ ಇಟ್ಟಿರುತ್ತಿದ್ದೆ.

ಕೊನೆಕೊನೆಗೆ ರಾಣಿ ತಾನೇ ಒಂಟಿಯಾಗಿ ಹೊರಹೋಗಲು ಷುರುಮಾಡಿತು. ಬೆಳಗ್ಗೆ ಸ್ವಲ್ಪಹೊತ್ತು ನನ್ನ ಜೊತೆ ಆಡಲು ಕೆಳಗಿಳಿದು ಬರುತ್ತಿತ್ತು. ಆ ಮೇಲೆ ತೋಟಕ್ಕೆ ಹೋಗುತ್ತಿತ್ತು. ಮರಹತ್ತಿ, ಹಣ್ಣುತಿನ್ನುತ್ತ ಇಡೀ ದಿನ ಮರದ ಮೇಲೆ ಆಟವಾಡುತ್ತಿತ್ತು.

ಈಗ ರಾಣಿ ಪೂರ್ತಿ ಬೆಳೆದಿತ್ತು. ಬೇರೆ ಎಲ್ಲ ಅಳಿಲುಗಳಂತೆ ಅದು ಸ್ವತಂತ್ರವಾಗಿತ್ತಾದರೂ ಅದರ ವಾಸ ಮಾತ್ರ ನಮ್ಮ ಮನೆಯಲ್ಲಿಯೇ. ಸಂಜೆಯಾಯಿತೆಂದರೆ ಮಲಗಲು ತನ್ನ ಪಂಜರಕ್ಕೆ ಬರುತ್ತಿತ್ತು.

ದಿನಕಳೆದಂತೆ ರಾಣಿ ಕಣ್ಣಿಗೆ ಬೀಳುವುದು ಅಪರೂಪವಾಯಿತು. ಒಂದೊಂದು ಸಲ ರಾತ್ರಿಯ ಹೊತ್ತು ಅದನ್ನು ಕರೆಯುತ್ತಿದ್ದೆ. ತಕ್ಷಣ ಎದ್ದು ಒಡೋಡುತ್ತ ನನ್ನ ಬಳಿ ಬರುತ್ತಿತ್ತು. ಆ ಮೇಲೆ ಕರೆಯುವುದನ್ನು ನಿಲ್ಲಿಸಿದೆ. ಪಾಪ! ನಿದ್ರೆಯಲ್ಲಿದ್ದಾಗ ಅದನ್ನು ಎಚ್ಚರಿಸಲು ಮನಸ್ಸು ಬರಲಿಲ್ಲ.

ಮುಂದೆ ಎಷ್ಟೋ ವಾರಗಳ ವರೆಗೆ ರಾಣಿ ಕಣ್ಣಿಗೆ ಬೀಳಲಿಲ್ಲ. ಆ ಮೇಲೆ ಒಂದು ದಿನ ತೋಟದಲ್ಲಿ ಅದನ್ನು ನೋಡಿದೆ. ಅದು ಒಂಟಿಯಾಗಿರಲಿಲ್ಲ. ಜೊತೆಗೆ ಇನ್ನೂ ಒಂದು ಅಳಿಲು ಇತ್ತು. ರಾಣಿಯನ್ನು ಕರೆದೆ. ಒಂದು ಕ್ಷಣ ನನ್ನ ಕಡೆ ನೋಡಿ ಹತ್ತಿರ ಬಂತು. ಜೊತೆಗಿದ್ದ ಅಳಿಲು ಓಡಿ, ಒಂದು ಮರ ಹತ್ತಿ ನಮ್ಮನ್ನು ನೋಡುತ್ತ ಕುಳಿತುಕೊಂಡಿತು.

ಆ ರಾತ್ರಿ ರಾಣಿ ಮನೆಯಲ್ಲಿದೆಯೇ ನೋಡೋಣ ಎಂದು ಕರೆದೆ, ಅದು ಬರಲಿಲ್ಲ. ಪಂಜರದಲ್ಲಿ ನೋಡಿದೆ. ಅಲ್ಲಿರಲಿಲ್ಲ. ರಾಣಿ ಹೊರಟುಹೋಗಿತ್ತು!

ರಾಣಿ ನನ್ನನ್ನು ಬಿಟ್ಟು ಹೋದದ್ದರಿಂದ ನನಗೆ ವ್ಯಥೆಯಾಯಿತು. ಆದರೆ ಅದಕ್ಕೆ ತನಗೆ ಬೇಕಾದಲ್ಲಿಗೆ ಹೋಗುವ ಸ್ವಾತಂತ್ರ್ಯ



ಏದೆ ಅಂದುಕೊಂಡು ಸುಮ್ಮನಾದೆ. ಪ್ರಾಯಶಃ ಅದಕ್ಕೀಗ ತನ್ನ ಗೆಳೆಯನ ಜೊತೆ ಸಿಕ್ಕಿತ್ತೇನೋ. ಅವೆರಡೂ ಒಟ್ಟಿಗೆ ಇರಬಯಸಿದ್ದವೇನೋ.

ರಾಣಿಯನ್ನು ಕಾಣದೆ ತಿಂಗಳುಗಳು ಕಳೆದವು. ನಾನೂ ಅದನ್ನು ಮರೆತುಬಿಟ್ಟೆ.

ಇದ್ದಕ್ಕಿದ್ದಂತೆ ಒಂದು ಬೆಳಗ್ಗೆ ಒಂದೇ ಸಮನೆ ಯಾವದೋ ಅಳಿಲು ಕಿರಚುತ್ತಿರುವ ಶಬ್ದ ಕೇಳಿಸಿತು. ಆ ಮೇಲೆ ಆ ಅಳಿಲು ನನ್ನ ಕಡೆ ಓಡಿ ಬರುತ್ತಿದ್ದುದು ಕಾಣಿಸಿತು, ನೋಡಿದರೆ ರಾಣಿ. ಅದು ನನ್ನ ಹತ್ತಿರ ಓಡಿ ಬಂತು. ಮತ್ತೆ ಹಿತ್ತಿಲ ಕಡೆ ಓಡಿಹೋಯಿತು. ಮತ್ತೆ ಓಡುತ್ತ ನನ್ನ ಹತ್ತಿರ ಬಂತು. ರಾಣಿ ಏನೋ ತೊಂದರೆಯಲ್ಲಿದೆ, ಅದಕ್ಕೆ ನನ್ನ ಸಹಾಯ ಬೇಕಾಗಿದೆ ಎಂದು ಗೊತ್ತಾಯಿತು. ಅದರ ಹಿಂದೆಯೇ ನಾನೂ ಹಿತ್ತಿಲ ಕಡೆ ಓಡಿದೆ. ಅಲ್ಲಿ ಒಂದು ಹಾವು ಒಂದು ಅಳಿಲನ್ನು ಹಿಡಿದುಕೊಂಡಿತ್ತು. ನೋಡಿ ನನಗೆ ದಿಗಿಲಾಯಿತು. ಸಹಾಯಕ್ಕಾಗಿ ಕೂಗಿಕೊಂಡೆ. ಚಿಕ್ಕಪ್ಪ ಓಡಿಬಂದು ಅಳಿಲನ್ನು ಉಳಿಸಲು ಪ್ರಯತ್ನಿಸಿದ. ಒಂದು ದೊಡ್ಡ ಕೋಲನ್ನು ತಂದು ಅದರ ಒಂದು ಕೊನೆಯಿಂದ ಹಾವಿನ ಮೈಯನ್ನು ಒತ್ತಿದ. ಹಾವು ಅಳಿಲನ್ನು ಬಿಟ್ಟುಬಿಟ್ಟಿತು. ಕೋಲನ್ನುಎತ್ತಿದಾಗ ಹಾವು ಸರಸರನೆ ಹರಿದುಹೋಯಿತು.

ಅಳಿಲು ನೆಲದಮೇಲೆ ತೆಪ್ಪಗೆ ಬಿದ್ದಿತು. ಮೆಲ್ಲನೆ ಕೈಯಲ್ಲೆತ್ತಿ ನೋಡಿದೆ. ಸತ್ತು ಹೋಗಿತ್ತು. ಅದು ರಾಣಿಯ ಗೆಳೆಯನೆಂದು ಗೊತ್ತಾಯಿತು. ಅದರ ಜೀವ ಉಳಿಸಲಿಕ್ಕಾಗದ್ದಕ್ಕೆ ವ್ಯಥೆಯಾಯಿತು. ಮರದ ಮೇಲಿನಿಂದ ನೋಡುತ್ತಿದ್ದ ರಾಣಿ ಕೆಳಗಿಳಿದು ಬಂತು. ಗೆಳೆಯನ ಮೈ ಮೂಸಿನೋಡುತ್ತ ಕೊಂಚ ಹೊತ್ತು ಅಲ್ಲೇ ಇತ್ತು. ಗೆಳೆಯ ಸತ್ತು ಹೋಗಿದ್ದುದು ಅದಕ್ಕೆ ತಿಳಿಯಿತು. ವಾಪಸು ಹೋಗಿ ಮರ ಸೇರಿತು.

ಇದ್ದಕ್ಕಿದ್ದಂತೆ ಹದ್ದೊಂದು ಹಾರಿಬಂದು ಸತ್ತ ಅಳಿಲನ್ನು ಕಚ್ಚಿಕೊಂಡು ಹೋಯಿತು. ರಾಣಿ ಅರಚತೊಡಗಿತು. ನಾವು ನಿಸ್ಸಹಾಯಕರಾಗಿ ನೋಡುತ್ತ ಅಲ್ಲೇ ನಿಂತಿದ್ದೆವು.

ಮೊದಲಿಗಿಂತಲೂ ಹೆಚ್ಚಾಗಿ ಹೆದರಿದಂತೆ ಅರಚಿಕೊಳ್ಳುತ್ತ ರಾಣಿ ಮರದ ಮೇಲಕ್ಕೆ ಹೋಯಿತು. ಮರದ ಮೇಲಿನ ಪೊಟರೆಯೊಳಗೆ ಮರೆಯಾದದ್ದು ಕಾಣಿಸಿತು.



“ಅದು ರಾಣಿಯ ಮನೆ. ಅದರ ಮರಿ ಅಲ್ಲಿದೆ ಅಂತ ಕಾಣುತ್ತೆ. ಮರಿಯ ನೆನಪಾಗಿ ಅದನ್ನು ಜೋಪಾನ ಮಾಡಲು ಹೋಗಿದೆಯೇನೋ” ಎಂದು ಚಿಕ್ಕಪ್ಪ ಹೇಳಿದ.

ಇಡೀ ದಿನ ರಾಣಿಯನ್ನೇ ಕುರಿತು ಯೋಚಿಸುತ್ತಿದ್ದೆ. ಅದರ ಅವಸ್ಥೆಯನ್ನು ಕಂಡು ತುಂಬ ದುಃಖವಾಯಿತು.



ಸಂಜೆ ನನ್ನ ಕೋಣೆಯಲ್ಲಿ ಒಬ್ಬನೇ ಕುಳಿತಿದ್ದಾಗ ಅಳಿಲು ಕಿರುಚುತ್ತಿರುವುದು ಕೇಳಿಸಿತು. ನೋಡಿದರೆ ರಾಣಿ ತನ್ನ ಮರಿಯನ್ನು ಬಾಯಲ್ಲಿ ಕಚ್ಚಿಕೊಂಡು ಬಂದಿದೆ. ರಾಣಿ ನನ್ನ ಹತ್ತಿರ ಬಂದು ಮರಿಯನ್ನು ನೆಲದ ಮೇಲೆ ಇರಿಸಿತು. ರಾಣಿ ಮರಿಯನ್ನೇಕೆ ತಂದಿತ್ತೆಂದು ನನಗೆ ಹೊಳೆಯಲಿಲ್ಲ. ಏನು ಮಾಡುವುದೆಂದು ಗೊತ್ತಾಗಲಿಲ್ಲ.

ಅಜ್ಜ, ಅಜ್ಜಿ, ಚಿಕ್ಕಪ್ಪ ಎಲ್ಲರನ್ನೂ ಕರೆದೆ. ತಕ್ಷಣ ಎಲ್ಲರೂ ಬಂದರು. ರಾಣಿ ಮರಿಯೊಂದಿಗೆ ನನ್ನ ಬಳಿ ಬಂದದ್ದನ್ನು ಕಂಡು ಅವರಿಗೆಲ್ಲಾ ಆಶ್ಚರ್ಯವಾಯಿತು. ಚಿಕ್ಕಪ್ಪ ಹೇಳಿದ — "ರಾಣಿಗೆ ಹದ್ದು ಹಾವುಗಳ ಭಯ. ಮರಿ ದೊಡ್ಡದಾಗುವವರೆಗೆ ನೀನು ಅದನ್ನು ಕಾಪಾಡಲಿ ಎಂದು ತಂದಿದೆ."

ಹಳೆಯ ಪಂಜರ ಹುಡುಕಿ ತೆಗೆದು, ಹಿಂದಿನಂತೆಯೇ ಮಾಡಿಗೆ ತೂಗುಹಾಕಿದೆ. ಅಳಿಲಿನ ಮರಿಯನ್ನು ಅದರಲ್ಲಿಟ್ಟೆ. ತನ್ನ ಪುಟ್ಟಾಣಿ ಪಂಜರದಲ್ಲಿ ಜೋಪಾನವಾಗಿರುವುದನ್ನು ಕಂಡು ತಕ್ಷಣ ರಾಣಿಯೂ ಪಂಜರದೊಳಗೆ ಹೋಯಿತು. ಅದಕ್ಕೆ ಹಾಲೂಡಿಸತೊಡಗಿತು.

ರಾಣಿಯನ್ನು ನೋಡುತ್ತ ನಾವು ಅಲ್ಲೇ ನಿಂತಿದ್ದೆವು. ಅಜ್ಜನ ಎದೆ ಕರಗಿಬಂತು. ಕೈಜೋಡಿಸಿ ನಮಸ್ಕಾರ ಮಾಡಿದರು. ಅವರ ಕೆನ್ನೆಯ ಮೇಲೆ ಕಣ್ಣೀರು ಹರಿಯುತ್ತಿತ್ತು. ಅವರು ಅಂದರು –"ಇದೆಲ್ಲಾ ದೇವರ ಲೀಲೆ, ದೇವರಪ್ರೀತಿ."